ಪಂ. ಕೇಶವಶರ್ಮಾ ಗಲಗಲಿ

# ಅಷ್ಟಕವರ್ಗ ಪದ್ಧತಿ

ನಿರಯನ







(ಕಾಲನಿರ್ಣಯಕ್ಕೂ - ಫಲನಿರ್ಣಯಕ್ಕೂ ಪ್ರಶಸ್ತಪದ್ಧತಿ)

ಬಿ. ವ್ಹಿ. ರಾಮನ್ ಅವರ ಮುನ್ನುಡಿಯೊಂದಿಗೆ

# ಅಷ್ಟಕವರ್ಗ ಪದ್ಧತಿ

ಶ್ರೀಯುತ ಬಿ. ವಿ. ರಾಮನ್
ಸಂ. ಎಸ್ಟ್ರಾಲಾಜಿಕಲ್ ಮ್ಯಾಗಝಿನ್, ಬೆಂಗಳೂರು
ಇವರ ಮುನ್ನುಡಿಯೊಂದಿಗೆ

ಲೇಖಕರು :
ಪಂಡಿತ ಕೇಶವಶರ್ಮಾ ಗಲಗಲಿ



ಸಮಾಜ ಪುಸ್ತಕಾಲಯ, ಧಾರವಾಡ – ೧

ಪ್ರಕಾಶಕರು :
ಸಮಾಜ ಪುಸ್ತಕಾಲಯ
ಧಾರವಾಡ–೧

ಸಮಾಜ ಪುಸ್ತಕಾಲಯದಿಂದ
ಪ್ರಥಮ ಮುದ್ರಣ : ೧೯೮೪



ಅಧಿಕೃತ ಮಾರಾಟಗಾರರು :
ಸಮಾಜ ಪುಸ್ತಕಾಲಯ,
ಶಿವಾಜಿಬೀದಿ, ಧಾರವಾಡ

ಶಾಖೆಗಳು :
ಸುಭಾಷಬೀದಿ, ಧಾರವಾಡ
ಕೊಪ್ಪೀಕರ ಬೀದಿ, ಹುಬ್ಬಳ್ಳಿ

ಮುದ್ರಕರು :
ಪ್ರತಿಭಾ ಮುದ್ರಣ,
ಧಾರವಾಡ

# ಸಮರ್ಪಣೆ

ಶ್ರೀಮಾನ್ **ಅಂದಾನೆಪ್ಪ ಜ್ಞಾನಪ್ಪ ದೊಡ್ಡಮೇಟಿ** M. L. A. ಇವರಿಗೆ–ಕರ್ನಾಟಕ ಏಕೀಕರಣಕ್ಕಾಗಿ ಅವರು ಪಟ್ಟ ಪರಿಶ್ರಮ,- ಸ್ವಾತಂತ್ರ್ಯ ಸಮರದಲ್ಲಿ ಅವರು ತೋರಿದ ಧೈರ್ಯ, ತ್ಯಾಗ, ನಿಗ್ರಹ ಮತ್ತು ಜ್ಯೋತಿಃಶಾಸ್ತ್ರದ ಪ್ರಗತಿಯ ಬಗ್ಗೆ ಅವರಿಗಿರುವ ಅಭಿಮಾನ, ಪ್ರೇಮ, ಆದರ ಇತ್ಯಾದಿ ಗುಣಗಳಿಂದ ಮುಗ್ಧನಾದ ಲೇಖಕನು ವಿನಮ್ರಭಾವದಿಂದ ಈ ಗ್ರಂಥವನ್ನು ಸಮರ್ಪಿಸುವನು.

ಧಾರವಾಡ

ದಿ. ೨೭–೧೨–೧೯೫೮ ಪಂ. **ಕೇಶವಶರ್ಮಾ ಗಲಗಲಿ**

# ಮಗನ ಮಾತು

ನನ್ನ ತಂದೆ ದಿ. ಪಂಡಿತ ಕೇಶವಶರ್ಮಾ ಗಲಗಲಿಯವರು ಬರೆದ 'ಅಷ್ಟಕವರ್ಗ ಪದ್ಧತಿ' ಎಂಬ ಜ್ಯೋತಿಃಶಾಸ್ತ್ರ ಗ್ರಂಥದ ಎರಡನೆಯ ಆವೃತ್ತಿಯು ಕಾಲು ಶತಮಾನದ ನಂತರ ಪುನರ್ಮುದ್ರಿತವಾಗಿ ಹೊರ ಬಂದಿದೆ. ಈ ಮಾತು ಸಂತೋಷವನ್ನುಂಟುಮಾಡಿದರೂ ಒಂದು ಶ್ರೇಷ್ಠ-ವಾದ ಶಾಸ್ತ್ರಗ್ರಂಥಕ್ಕೆ ಕರ್ನಾಟಕದಲ್ಲಿ ಸಿಕ್ಕ ಪುರಸ್ಕಾರವನ್ನು ನೆನೆದಾಗ ಏನೋ ಒಂದು ಮನೋವೇದನೆ.

ನನ್ನ ತಂದೆಯವರೇ ಹೇಳಿದ್ದಾರೆ : 'ಉಂಡುಯದವರು ನಾಲ್ವರಲ್ಲಿ ಶಾಸ್ತ್ರದ ಬೆಳಕು ಹೊಳೆಯಲೆಂದು ದಣಿದು ಕೋಡಿದೆನು; ಬಡವನಳಿಲು ಸೇವೆ-ಯೆಂದು ಧನ್ಯನಾದೆನು." ಅವರು ಅರ್ಥಾರ್ಜನೆಗಾಗಿ ಬರೆಯಲಿಲ್ಲ. ಶಾಸ್ತ್ರ ಬೆಳಕು ಹೊಳೆಯಲೆಂದು ಬರೆದರು. ನನಗೂ ಅದೇ ಸಮಾಧಾನ.

ಶಾಸ್ತ್ರಗ್ರಂಥಕ್ಕೆ ಯಾವ ಪುರಸ್ಕಾರವಿದೆ ಎಂದರಿತೂ ಈ ಗ್ರಂಥವನ್ನು ಪುನರ್ಮುದ್ರಿಸಲು ನುಕ್ಕಳಿಗೆ ಪ್ರೋತ್ಸಾಹನೆಯಿತ್ತರು— ಶ್ರೀ ಭಾಲಚಂದ್ರ ಘಾಣೇಕರರು. ಒಳ್ಳೇ ಗ್ರಂಥಗಳನ್ನೇ ಪ್ರಕಾಶಿಸುವ ಸಂಕಲ್ಪಮಾಡಿದ ಅವರ ಪುತ್ರದ್ವಯರಾದ ಡಾ. ಮನೋಹರ ಘಾಣೇಕರ, ರವಿ ಘಾಣೇಕರ ಇಂಥ ತುಟ್ಟಿಯ ದಿನಗಳಲ್ಲೂ ಧೈರ್ಯದಿಂದ ದ್ವಿತೀಯ ಆವೃತ್ತಿಯನ್ನು ಹೊರತಂದಿ-ದ್ದಾರೆ. ಅವರಿಗೆ ನನ್ನ ಧನ್ಯವಾದಗಳು.

ವಿಶೇಷ ಪರಿಶ್ರಮ ವಹಿಸಿ ಮೊಳೆ ಜೋಡಿಸಿದ ಕುಮಾರಿ ಸುವರ್ಣಾ ವಾಲಗಳ್ಳಿ ಹಾಗು ಶ್ರಮವಹಿಸಿ ಪ್ರೂಫ್ ತಿದ್ದಿದ ಬೀಗೂರ ಮಾಸ್ತರರೂ ಅಭಿನಂದನಾರ್ಹರು.

ವಾಚಕರಲ್ಲಿ ವಿಜ್ಞಾಪನೆ:—

ಆವೃತ್ತಿಯ ಆಕಾರದಲ್ಲಿ ಬದಲಾವಣೆಯಾಗಿದೆ, ಅನಿವಾರ್ಯವಾಗಿ. ಹೀಗಾಗಿ ಕೆಲವೆಡೆ ನಿಯಮಗಳು ಹಿಂದು-ಮುಂದೆ ಬಂದು ಉದಾಹರಣೆಯ

ಕುಂಡಲಿ ನಡುವೆ ಬಂದಿವೆ, ಕೆಲವೆಡೆಗೆ ಮುಂದಿನ ಪುಟಕ್ಕೆ ಮುಂದುವರಿದಿವೆ. ಅಭ್ಯಾಸಿಗಳು ಸ್ವಲ್ಪ ತಾಳ್ಮೆಯಿಂದ ಪರಿಶೀಲಿಸಬೇಕೆಂದು ಕೋರುವೆ. ಶಾಸ್ತ್ರವಿದರಿಗೆ ತೊಂದರೆಯಾಗಲಿಕ್ಕಿಲ್ಲ. ಆದರೂ ಅವರನ್ನೂ ತಾಳ್ಮೆಯಿಂದ ಪರೀಕ್ಷಿಸಲು ಕೇಳಿಕೊಳ್ಳುವೆ. ಪ್ರತಿ ಗ್ರಹದ ಅಷ್ಟಕವರ್ಗವನ್ನು ಹಾಕುವ ಮುನ್ನ ಕೊನೆಗೆ ಕೊಟ್ಟ ಶುದ್ಧಿಪತ್ರವನ್ನೂ ಗಮನಿಸುವುದು ಒಳಿತು.

ತಾಯಿಗೆ ನಮಸ್ಕರಿಸುವೆ. ಗೆಳೆಯರಾದ ಭಾಲಚಂದ್ರರು, ಸತ್ಯಕಾಮ, ಶಾಸ್ತ್ರದಲ್ಲಿ ಅಪಾರ ಶ್ರದ್ಧೆ–ವಿಶ್ವಾಸಹೊಂದಿದ ಶ್ರೀ ಕುರಡೂರ ರಾಮರಾಯರಿಗೆ ವಂದನೆಗಳು.

ತೇಜಸ್ವಿನಗರ, ಧಾರವಾಡ
೧–೧–೧೯೮೫

ಹ. ಗ. ಜೋಶಿ

ವಿಶೇಷ ಸೂಚನೆ :—

ಅಷ್ಟಕವರ್ಗ ಪದ್ಧತಿಯಂತೆ ಕುಂಡಲಿಯನ್ನು ಹಾಕುವ ಪೂರ್ವದಲ್ಲಿ ಕೆಳಗಿನ ಅಂಶಗಳನ್ನು ಗಮನಿಸಬೇಕು. ಅಂದರೆ ಲೆಕ್ಕ ತಪ್ಪುವದಿಲ್ಲ.

(೧) ೬೬ ನೆಯ ಪುಟದಲ್ಲಿ ಗುರುವಿನ ಅಷ್ಟಕವರ್ಗದ ತ್ರಿಕೋಣ ಶೋಧನ ಕುಂಡಲಿಯಲ್ಲಿ ಅಷ್ಟಮಸ್ಥಾನದಲ್ಲಿ ೩ ಅಂಕೆ ಬಿದ್ದಿದೆ. ಅದನ್ನು ಬಿಟ್ಟುಬಿಡಬೇಕು.

(೨) ೧೦೦ ನೆಯ ಪುಟದಲ್ಲಿ ಲಗ್ನಾಷ್ಟಕವರ್ಗದಲ್ಲಿ ಸೂರ್ಯ ನಿಂದ ೧೦ ನೆಯ ಸ್ಥಾನದಲ್ಲೂ ಒಂದು ಬಿಂದು ಹಾಕಬೇಕು.

(೩) ೧೦೯ ನೆಯ ಪುಟದಲ್ಲಿ ೩ ನೆಯ ಕುಂಡಲಿಯಲ್ಲಿ ಪಂಚಮ ಸ್ಥಾನದಲ್ಲಿ ೨ ಅಂಕೆ ಬಿದ್ದಿದೆ. ಅದನ್ನು ಬಿಟ್ಟುಬಿಡಬೇಕು.

# ಪರಿವಿಡಿ

# ಮುನ್ನುಡಿ

ಜ್ಯೋತಿಷಶಾಸ್ತ್ರವು ವೇದದ ಒಂದು ಪ್ರಧಾನ ಅಂಗ. ಇದು ಎಲ್ಲರಿಗೂ ತಿಳಿದ ವಿಷಯ. ಹಾಗು ಆಧುನಿಕ ವಿಜ್ಞಾನದ ಒಂದು ಭಾಗವೂ ಸಹ ಆಗಿರುತ್ತದೆಂದು ಹೇಳಬಹುದು. ಈ ಅಭಿಪ್ರಾಯ ಕೆಲವರ ದೃಷ್ಟಿಯಲ್ಲಿ ಚರ್ಚಾಸ್ಪದವಾದರೂ ಸತ್ಯಾಂಶದಿಂದ ಕೂಡಿರುತ್ತದೆ. ಆದರೆ ಜ್ಯೋತಿಷ್ಯಕ್ಕೂ ಭೌತಿಕ ಶಾಸ್ತ್ರಗಳಿಗೂ ಇರುವ ಸಹಜ ವ್ಯತ್ಯಾಸವನ್ನು ಗಮನಿಸಬೇಕು. ಭೌತಿಕಶಾಸ್ತ್ರ ರಂಗದಲ್ಲಿ ವಸ್ತು ಸಂಚಯ ನಿರ್ಜೀವ ದ್ರವ್ಯ. ಆದರೆ ಜೀವಿಗಳಿಗೆ ಸಂಬಂಧಿಸಿರುವ ಶಾಸ್ತ್ರ ಜ್ಯೋತಿಷ್ಯ. ಭಾರತ ಮತ್ತು ಇತರ ಪಾಶ್ಚಾತ್ಯ ದೇಶಗಳಲ್ಲಿ ಜ್ಯೋತಿಶ್ಶಾಸ್ತ್ರದ ಬಗ್ಗೆ ನಡೆಯುತ್ತಿರುವ ಪರಿಶೋಧನೆಗಳೂ ಮತ್ತು ನಾನಾ ಭಾಷೆಗಳಲ್ಲಿ ಪ್ರಚುರವಾಗುತ್ತಿರುವ ಗ್ರಂಥಗಳೂ ಈ ಶಾಸ್ತ್ರದ ಬಗ್ಗೆ ಎಷ್ಟು ಆಸಕ್ತಿ ಮತ್ತು ಆದರ ಉಂಟಾಗುತ್ತಿರುವದೆಂಬುದಕ್ಕೆ ಹೆಗ್ಗುರುತಾಗಿವೆ.

ಭಾರತೀಯ ಜ್ಯೋತಿಶ್ಶಾಸ್ತ್ರದಲ್ಲಿ ಫಲ ನಿರೂಪಣೆ ಬಗ್ಗೆ ಅಷ್ಟಕವರ್ಗಕ್ಕೆ ಪ್ರಧಾನಸ್ಥಾನ ಕೊಡಲ್ಪಟ್ಟಿದೆ. ಕನ್ನಡದಲ್ಲಿಯೂ ಸಹ ಅಷ್ಟಕವರ್ಗದ ಮೇಲೆ ಅನೇಕ ಗ್ರಂಥಗಳಿವೆ. ಆದರೆ ನನಗೆ ತಿಳಿದ ಮಟ್ಟಿಗೆ ಪಂಡಿತ ಕೇಶವ ಶರ್ಮಾ ಗಲಗಲಿಯವರ "ಅಷ್ಟಕವರ್ಗ ಪದ್ಧತಿ" ಯಂತೆ ಅನುಭವಸಿದ್ಧವಾಗಿ, ತಾರ್ಕಿಕವಾಗಿ ಹೊಂದಿಸಿ ಸಂದೇಹವನ್ನು ನಿವಾರಣ ಮಾಡುವ ಗ್ರಂಥವು ಇದುವರೆಗೂ ಕನ್ನಡದಲ್ಲಿ ಕಾಣಿಸುವದಿಲ್ಲ. ಈ ನ್ಯೂನತೆಯನ್ನು ಹೋಗಲಾಡಿಸಿ ಶ್ಲೋಕಗಳಿಗೆ ಸರಿಯಾದ ಅರ್ಥವನ್ನು ಬರೆದು, ಅವುಗಳನ್ನು ಸಕಾರಣವಾಗಿ ಉದಾಹರಿಸಿ ಜ್ಯೋತಿಷ್ಕರಿಗೆ ಮಹೋಪಕಾರ ಮಾಡಿರುವ ಪಂಡಿತ ಕೇಶವ ಶರ್ಮಾ ಗಲಗಲಿಯವರು ಪೂಜ್ಯರು. ಪಂಡಿತ ಗಲಗಲಿಯವರ ವ್ಯಾಖ್ಯಾನವು ಕೆಲವು ಸಂದರ್ಭಗಳಲ್ಲಿ ಕೊಂಚ ಭಿನ್ನಾಭಿಪ್ರಾಯಕ್ಕೆ ಎಡೆಕೊಡಬಹುದಾದರೂ ಅದನ್ನು

ತಾವು ತಮ್ಮ ಅರ್ಥದಿಂದ ಸಮರ್ಥನೆ ಮಾಡಿಕೊಂಡಿದ್ದಾರೆ. ತ್ರಿಕೋಣ ಶೋಧನೆ ಹಾಗೂ ಏಕಾಧಿಪತ್ಯ ಶೋಧನೆ— ಈ ಬಗ್ಗೆ ಜ್ಯೋತಿಷ್ಕರಲ್ಲಿ ಭಿನ್ನಾಭಿಪ್ರಾಯಗಳಿದ್ದಾಗ್ಯೂ ಗ್ರಂಥಕರ್ತರು ತಮ್ಮ ಅಭಿಪ್ರಾಯವನ್ನು ಸರಿಯಾಗಿ ಸಮರ್ಥಿಸಿಕೊಂಡು ಸೂಕ್ತವಾದ ವ್ಯಾಖ್ಯಾನವನ್ನು ಓದುಗರಿಗೆ ಕೊಟ್ಟಿರುವುದು ಒಂದು ಮಹೋಪಕಾರವಾಗಿದೆ.

ಪಂಡಿತ ಕೇಶವ ಶರ್ಮಾ ಗಲಗಲಿಯವರು ಜ್ಞಾನವೃದ್ಧರೂ, ವಯೋವೃದ್ಧರೂ ಆಗಿ ಪಾಶ್ಚಾತ್ಯ ಪೌರ್ವಾತ್ಯ ಜ್ಯೋತಿಷ್ಯ ಶಾಸ್ತ್ರಗಳಲ್ಲಿ ಸಾಕಷ್ಟು ಪಾಂಡಿತ್ಯ ಗಳಿಸಿರುತ್ತಾರೆ. ಆದರೂ ನಿರಾಡಂಬರರು, ಸರಳ ಹೃದಯದವರು. ಇಂತಹವರು ಕನ್ನಡದಲ್ಲಿ ಜ್ಯೋತಿಶ್ಶಾಸ್ತ್ರ ಅಭಿವೃದ್ಧಿಗಾಗಿ ಮಾಡುತ್ತಿರುವ ಪ್ರಯತ್ನ ಸ್ತುತ್ಯರ್ಹ.

ಜ್ಯೋತಿಶ್ಶಾಸ್ತ್ರಾಭ್ಯಾಸಿಗಳಿಗೆ, ಜ್ಯೋತಿಶ್ಶಾಸ್ತ್ರಾಭಿರುಚಿಯಿರುವವರಿಗೆ ಶ್ರೀ ಕೇಶವ ಶರ್ಮಾ ಗಲಗಲಿಯವರ "ಅಷ್ಟಕವರ್ಗ ಪದ್ಧತಿ" ಅತ್ಯಾವಶ್ಯಕವೆಂದು ನನ್ನ ಅಭಿಪ್ರಾಯ. ಇವರ ಪ್ರಯತ್ನವನ್ನು ಕರ್ನಾಟಕ ಪ್ರಪಂಚ ಆದರಿಸಿ ಇಂತಹ ಪುಸ್ತಕಗಳನ್ನು ಇದೇ ರೀತಿ ವ್ಯಾಖ್ಯಾನಿಸಿ ಪ್ರಕಟಿಸಲು ಈ ಗ್ರಂಥಕರ್ತರನ್ನು ಭಗವಂತನು ಅನುಗ್ರಹಿಸಲೆಂದು ನನ್ನ ಕೋರಿಕೆ.

೩-೧-೧೯೭೯ **ಬಿ. ವಿ. ರಾಮನ್**

ಶ್ರೀ ರಾಜೇಶ್ವರಿ, ಬೆಂಗಳೂರು ೩. ಸಂಪಾದಕ, ಆಸ್ಟ್ರೋಲಾಜಿಕಲ್ ಮೆಗಜೀನ್

# ಹೃದ್ಗತ

ಅಷ್ಟಕವರ್ಗ ಪದ್ಧತಿಯು ಜ್ಯೋತಿರ್ವಿದರಲ್ಲಿ ಪ್ರಸಿದ್ಧನಾದ ಒಂದು ಪದ್ಧತಿ. ಇದು ಫಲನಿರ್ಣಯಕ್ಕೂ, ಕಾಲನಿರ್ಣಯಕ್ಕೂ ಸಹಕಾರಿಯಾದ ಒಂದು ಪ್ರಶಸ್ತ ಪದ್ಧತಿ. ಈ ಪದ್ಧತಿಯ ವಿವೇಚನೆ ಬೃಹತ್ಪಾರಾಶರ, ಹೋರಾಶಾಸ್ತ್ರ, ಬೃಹಜ್ಜಾತಕ, ಜಾತಕ ಪಾರಿಜಾತಾದಿ ಪ್ರಾಚೀನ ಗ್ರಂಥಗಳಲ್ಲಿ ಮಾಡಲ್ಪಟ್ಟಿರುವದು. ಈ ಗ್ರಂಥಗಳಲ್ಲಿ ನಾನು ಅನೇಕ ವರ್ಷಗಳ ಹಿಂದೆ ಓದಿಕೊಂಡಿದ್ದೆನಾದರೂ ಅದರ ಆಕಲನವು ಚೆನ್ನಾಗಿ ಆಗಿರಲಿಲ್ಲ. ಶ್ರೀ ಬಿ. ವ್ಹಿ. ರಾಮನ್ನರ "ಹಿಂದು ಪ್ರಿಡಿಕ್ಟಿವ್ಹ ಎಸ್ಟ್ರಾಲಾಜಿ" ಯಲ್ಲಿ ಸಂಕ್ಷಿಪ್ತವಾಗಿ ಆದರೂ ಈ ಪದ್ಧತಿಯಲ್ಲಿ ವಿಶ್ವಾಸ ಹುಟ್ಟುವಂತೆ ಅವರು ವಿವೇಚಿಸಿದ್ದರಿಂದ ಈ ಪದ್ಧತಿಯ ಅಭ್ಯಾಸದ ಬಗ್ಗೆ ಕೌತುಕವುಂಟಾಯಿತು. ಇದನ್ನು ಚೆನ್ನಾಗಿ ಅಭ್ಯಾಸ ಮಾಡುವದಕ್ಕೆ ಈಗ ೨ ವರುಷಗಳ ಹಿಂದೆ ಮುಂಬಯಿ ಜ್ಯೋತಿರ್ವಿದರಾದ ಶ್ರೀ ಪಟೇಲ್, ಅಯ್ಯಂಗಾರರು ಇಂಗ್ಲಿಷ್‌ದಲ್ಲಿ ಪ್ರಾಚೀನ ಉಪಲಬ್ಧ ಗ್ರಂಥಗಳಿಂದ ಪದ್ಯಗಳನ್ನೆಲ್ಲ ಉದ್ಧರಿಸಿ ವಿವರಣೆ ಮಾಡಿದ್ದರಿಂದ ಈ ಪುಸ್ತಕವನ್ನು ಸಾವಧಾನದಿಂದ ಅಭ್ಯಾಸ ಮಾಡಬೇಕಾಯಿತು. ಪರಾಶರ ಹೋರಾ, ಬೃಹಜ್ಜಾತಕ, ಜಾತಕ ಪಾರಿಜಾತಕಗಳನ್ನು ಪುನಃ ಪರಿಶೀಲಿಸಿ ಪದ್ಧತಿಯ ಪರೀಕ್ಷೆಯನ್ನು ನನಗೆ ಪರಿಚಿತವಿರುವ ಕುಂಡಲಿಗಳಲ್ಲಿ ಮಾಡಿನೋಡಲಾಗಿ ಅನೇಕ ಸತ್ಯಾಂಶಗಳು ತೋರಿಬಂದವು. ನನ್ನ ಸ್ನೇಹಿತರು ಈ ಬಗ್ಗೆ ಒಂದು ಪುಸ್ತಕವನ್ನು ಬರೆಯಬೇಕೆಂದು ಸೂಚಿಸಿದರು. ಎಲ್ಲ ನಿಜ- 'ಸರ್ವಾರಂಭಾಃ ತಂಡುಲಾಃ ಪ್ರಸ್ಥಮೂಲಾಃ' ಎಂಬುವಂತೆ ಇದು ಶಾಸ್ತ್ರೀಯ ಗ್ರಂಥ. ಪ್ರಕಾಶನಕ್ಕೆ ಧನ ಬೇಕು. ಶಾಸ್ತ್ರೀಯ ಗ್ರಂಥಕ್ಕೆ ಕಥೆ ಕಾದಂಬರಿಗಳಂತೆ, ಜಾನಪದ ಸಾಹಿತ್ಯದಂತೆ ಪ್ರಕಾಶಕರು ದೊರೆಯಲಾರರು. ಮತ್ತು ಈ ಪದ್ಧತಿಯ

ವಿಶೇಷನೆಯನ್ನು ಸಾವಧಾನದಿಂದ ಮಾಡಬೇಕಾಗುವದು. ಇದೂ ಜೈಮಿನಿ ಪದ್ಧತಿಯಂತೆ ಕ್ಲಿಷ್ಟವಾಗಿರುವದು. ಜೈಮಿನಿ ಪದ್ಧತಿಯಲ್ಲಿ ಸವ್ಯಾಪಸವ್ಯ-ಗಳನ್ನು ಗುಣಿಸುವಂತೆ, ಈ ಪದ್ಧತಿಯಲ್ಲಿ ಕರ್ಮಕಾಂಡದಂತೆ ವಿಧಿವಿಧಾನ-ಗಳನ್ನೂ ಸ್ಥಂಡಿಲವನ್ನೂ ರಚಿಸಿಕೊಳ್ಳಬೇಕಾಗುವದು. ಅವಧಾನವು ತಪ್ಪಿದರೆ ಎಲ್ಲವೂ ತಪ್ಪುವದು." ಕಣ್ವಋಷಿಯಂತೆ 'ಧೂಮಾವೃತ ದೃಷ್ಟೇರಪಿ ಪಾವಕ ಏವ ಆಹುತಿಃ ಪತಿತಾ' ಎನ್ನುವ ಪುಣ್ಯಬೇಕು. ಆ ಪುಣ್ಯ—ಋಷಿಯ ಕುಲದಲ್ಲಿ ಹುಟ್ಟಿದ ನನಗೆ ಆ ಋಷಿಯ ಅಲ್ಪಾಂಶ ಪುಣ್ಯವು ದೊರಕೀತೆಂಬ ವಿಶ್ವಾಸದಿಂದ ಪುಸ್ತಕವನ್ನು ಬರೆಯುವ ಸಾಹಸ ಮಾಡಿರುವೆ. ಅಂತೂ ಒಂದು ವರ್ಷ ಪುಸ್ತಕ ಬರೆಯುವಲ್ಲಿ ಕಳೆಯಬೇಕಾ-ಯಿತು.

ಜೀವನಕಲಹ ಜಟಿಲತೆಯಲ್ಲಿ ನಾನು ಅವಕಾಶ ಸಿಕ್ಕಾಗಲೆಲ್ಲ ಅನೇಕ ವರುಷಗಳಿಂದ ಸಂಸ್ಕೃತ ಸಾಹಿತ್ಯದಂತೆ ಈ ಶಾಸ್ತ್ರವನ್ನು ಅಭ್ಯಾಸ ಮಾಡುತ್ತ ಬಂದಿರುವೆನು. ಈ ಶಾಸ್ತ್ರದ ಗುರೂಪದೇಶವು ಲಭಿಸಿದ್ದು ನನಗೆ ನನ್ನ ತಂದೆಯವರಿಂದಲೇ. ಹಳ್ಳಿಯ ಜೋಯ್ಸರ ಮನೆತನದಲ್ಲಿ ಹುಟ್ಟಿದ್ದರಿಂದ ನಮಗೆ ಜ್ಯೋತಿಷ್ಯದ ಪ್ರಾಥಮಿಕ ಪಾಠಗಳು ಆಗಿನ ಕಾಲದಲ್ಲಿ ಬಾಲ್ಯ ಕಾಲದಲ್ಲಿಯೇ ಕೊಡಲ್ಪಡುತ್ತಿದ್ದವು. ನನ್ನ ತಂದೆಯ-ವರಾದ ಪೂಜ್ಯ ರಂಗಭಟ್ಟರು ಆಗಿನ ಕಾಲದಲ್ಲಿ ಪ್ರಖ್ಯಾತ ಜ್ಯೋತಿರ್ವಿದ-ರಾಗಿದ್ದರು. ಪರಾಶರ ಹೋರಾ, ಬೃಹಜ್ಜಾತಕ, ಮುಹೂರ್ತತತ್ತ್ವ, ಮುಹೂರ್ತ ಮಾರ್ತಂಡ, ಬೃಹತ್ ಸಂಹಿತೆ ಮೊದಲಾದ ಗ್ರಂಥಗಳನ್ನು ಪರಿ-ಶೀಲನೆ ಮಾಡಿದವರಿದ್ದರು. ಮತ್ತು ಅವರಲ್ಲಿ ಒಂದು ವಿಶಿಷ್ಟ ಆತ್ಮಶಕ್ತಿಯಿ-ದ್ದಿತು. ಸ್ಫೂರ್ತಿಯಿಂದ ಅನೇಕಸಾರೆ ಭವಿಷ್ಯ ಹೇಳುತ್ತಿದ್ದರು. ಇಂತಹ ಅವರು ಹೇಳಿದ ಅನೇಕ ಭವಿಷ್ಯಕಥನಗಳು ಸಹ ಸರಿಯಾಗಿ ಬಂದದ್ದರಿಂದ ಜನರು ಆಗಿನ ಕಾಲದಲ್ಲಿ ಅವರನ್ನು ಭಕ್ತಿ-ಭಾವನೆಯಿಂದ ಕಾಣುತ್ತಿದ್ದರು.

ಇವರು ನನಗೆ ನಾನು ೭-೮ ವರ್ಷದವನಿದ್ದಾಗಲೆ ಮುಹೂರ್ತ-ತತ್ತ್ವ, ಷಟ್‌ಪಂಚಾಶಿಕೆಗಳನ್ನು ತಿಳಿಯಲಿ, ತಿಳಿಯದೆ ಇರಲಿ ಪಾಠ ಮಾಡಿದ್ದರು. ನವಾಂಶವೆಂದರೇನೆಂದು ಕೇಳಿದಾಗ "ತ್ರಿಂಶಾಂಶ, ಸಹಾ

ಚಾಳೀಸ, ದಹಾಪೂರ್ಣ " ಪಾಠ ಮಾಡಿಸಿದ್ದರು. ಮುಂದೆ ನನಗೆ ಜ್ಯೋತಿಃಶಾಸ್ತ್ರದ ಪರಿಭಾಷೆಯನ್ನು ಪಾಠ ಮಾಡುವ ಆವಶ್ಯಕತೆ ಬೀಳಲೇ ಇಲ್ಲ. ಮುಂದೆ ಪ್ರೌಢನಾದ ಬಳಿಕ ಆಧುನಿಕ ವಿದ್ಯಾಸಂಸ್ಕಾರವಾದ ಬಳಿಕ ಜ್ಯೋತಿಷ್ಯವು ಪ್ರಯತ್ನವಾದಕ್ಕೆ ಅಡ್ಡಿಯನ್ನುಂಟು ಮಾಡುವದೆಂದು ಬಿಟ್ಟುಬಿಟ್ಟೆನು. ಮೈಸೂರಲ್ಲಿ ಪಂಡಿತ ಪರೀಕ್ಷೆ ಪಾಸಾಗಿ ಬಂದಬಳಿಕ, ಒಂದು ದಿವಸ ನನಗೆ ಆಕಸ್ಮಿಕವಾಗಿ ಪುಣೆಯ ರಘುನಾಥಶಾಸ್ತ್ರಿ ಪಟ- ವರ್ಧನರ ಮರಾಠಿಯ ಒಂದು ಜ್ಯೋತಿಷ್ಯಶಾಸ್ತ್ರದ ಪುಸ್ತಕವು ಕಣ್ಣಿಗೆ ಬಿದ್ದಿತು. ಅವರು ಆ ಪುಸ್ತಕದಲ್ಲಿ ಜ್ಯೋತಿಃಶಾಸ್ತ್ರವು ಅಭ್ಯಸನೀಯ ಶಾಸ್ತ್ರವೆಂದು ಆಧುನಿಕರು ಒಪ್ಪುವಂತೆ ಸಮರ್ಥಿಸಿ ಬರೆದಿರುವರು. (ಇತ್ತ- ಲಾಗಿ ಬಿ. ವ್ಹಿ. ರಾಮನ್ನರೂ "Astrology and modern thought" ಪುಸ್ತಕದಲ್ಲಿ ಶಾಸ್ತ್ರದ ಮಹತ್ವವನ್ನು ಸಮರ್ಥಿಸಿ ಬರೆ- ದಂತೆ) ಪಟವರ್ಧನರ ಪುಸ್ತಕವು ನನ್ನ ಮನಸ್ಸಿನ ಮೇಲೆ ಇಷ್ಟ ಪರಿಣಾಮವನ್ನುಂಟು ಮಾಡಿತು. ಇತ್ತಲಾಗಿ ಮನೆಯಲ್ಲಿ ತಂದೆಯವರು, 'ನೀನು ಜಾಣನೆನಿಸಿಕೊಂಡರೂ ನನ್ನ ವಿದ್ಯೆಯನ್ನು ಮನೆಯಲ್ಲಿ ಮುಳು- ಗಿಸುವೆಯಾ ?' ಎನ್ನುತ್ತಿದ್ದರು. ಅವರ ಅಂತಃಪ್ರೇರಣೆಯಿಂದ ನಾನು ಪುನಃ ಜ್ಯೋತಿಃಶಾಸ್ತ್ರದ ಅಭ್ಯಾಸವನ್ನು ಪುನರಾರಂಭಿಸಿದೆನು. ೩೦ ವರುಷ- ಗಳ ಹಿಂದೆ ಇಷ್ಟೇ ಸಾಲದೆಂದು ಸಾಯನ ಪದ್ಧತಿಯ ಅಭ್ಯಾಸವನ್ನೂ ತುಲನಾತ್ಮಕದ ದೃಷ್ಟಿಯಿಂದ ಮಾಡಬೇಕಾಯಿತು. ಈ ವಿಷಯದಲ್ಲಿ ನನಗೆ ಮುಂಬಯಿ ಜ್ಯೋತಿರ್ವಿದರಾದ ಯಶವಂತ ಕೇಶವ ಪ್ರಧಾನರು ಸಹಾಯಕರಾದರು. ಅವರು ಜ್ಯೋತಿರ್ಮಾಲೆಯ ೧೦ ವರುಷಗಳ ಕೆಲವು ಅಂಕಗಳನ್ನು ಕಳಿಸಿ ಕೊಟ್ಟರು. ಅವರ ಮಾರ್ಗದರ್ಶನದಲ್ಲಿ ರಾಫೇಲ, ಲೀವೋ, ಝಾಡಕೀಲ ಮೊದಲಾದ ಆಂಗ್ಲ ಜ್ಯೋತಿರ್ವಿದರ ಗ್ರಂಥಗಳನ್ನೂ ತರಿಸಿಕೊಂಡೆನು.

ನಾನು ನವಿಲುಗುಂದ ಟ್ರೇನಿಂಗ ಕಾಲೇಜದಲ್ಲಿ ಶಿಕ್ಷಕನಾಗಿರುವಾಗ ಶ್ರೀ ಬಿ. ವ್ಹಿ. ರಾಮನ್ನರೂ ನನಗೆ ಅನೇಕ ಗ್ರಂಥಗಳನ್ನು ಕಳುಹಿಸಿ- ಕೊಟ್ಟು ನನ್ನ ಅಭ್ಯಾಸಕ್ಕೆ ನೆರವಾದರು.

ಈ ಶಾಸ್ತ್ರವು ಗಹನವೂ, ಗಂಭೀರವೂ ಆಗಿರುವದು. ಇದರ ಅಭ್ಯಾಸಕ್ಕೆ ಒಂದು ಜನ್ಮ ಸಾಲದು. ನಾನಿಂದಿಗೂ ಕೂಡ ದಿನಾಲು ೨-೩ ತಾಸು ಈ ಶಾಸ್ತ್ರದ ಅಭ್ಯಾಸ ಮಾಡುತ್ತಿರುವೆನು; ನಾನು ಕಷ್ಟಪಟ್ಟು ಸಂಪಾದಿಸಿದ ವಿದ್ಯೆ ಇಂದಿನ ತರುಣರಿಗೂ ಪ್ರಯೋಜನಕಾರಿಯಾಗಲೆಂದು ಈ ಕೊತ್ತಿಗೆಯನ್ನು ಬರೆದಿರುವೆನು. ಜ್ಯೋತಿಃಶಾಸ್ತ್ರದಲ್ಲಿ ಸತ್ಯಾಂಶವಿಲ್ಲದಿದ್ದರೆ ನಾನು ಅಭ್ಯಾಸ ಮಾಡುತ್ತಲೇ ಇರಲಿಲ್ಲ. ಆದರೆ ಆ ಸತ್ಯಾಂಶವನ್ನು ಖಣಿಯಲ್ಲಿಯ ಬಂಗಾರದಂತೆ ಶೋಧಿಸಿ ತೆಗೆಯಬೇಕಾಗುವದು. ಇದಕ್ಕೆಲ್ಲ ರಾಜಾಶ್ರಯ ಬೇಕು. ಜ್ಯೋತಿಃಶಾಸ್ತ್ರವು ಭಾರತೀಯ ಸಂಸ್ಕೃತಿಯ ಒಂದು ಅಂಗವಿರುವದು. ಭಾರತೀಯ ಸಂಸ್ಕೃತಿಯ ಪುನರುದ್ಧಾರದ ಕಡೆಗೆ ಇಂದು ಅನೇಕರ ಲಕ್ಷ್ಯವು ಎಳೆಯಲ್ಪಟ್ಟಿದ್ದರೂ ಜ್ಯೋತಿರ್ವಿದ್ಯೆ ಮಾತ್ರ ಇನ್ನೂ ಅನಾದೃತ ಅವಸ್ಥೆಯಲ್ಲಿರುವದು. ದಿಲ್ಲೀ ವಲ್ಲಭರ ಕೃಪಾಪಾಂಗಕ್ಕೆ ಇದಿನ್ನೂ ಪಾತ್ರವಾಗಿಲ್ಲ. ಇರಲಿ. ಇಂದಿಲ್ಲ ನಾಳೆ ಪಾತ್ರವಾಗಬಹುದು. " ಕಾಲಃ ಕರೋತಿ ಕಾರ್ಯಾಣಿ. "

ಈ ಪುಸ್ತಕವನ್ನು ಮನವಮುಟ್ಟಿ ಅಭ್ಯಾಸ ಮಾಡಿದರೆ ವಾಚಕರು ತಮ್ಮ ಕುಂಡಲಿಯನ್ನು ತಾವೇ ಪರೀಕ್ಷಿಸಿಕೊಳ್ಳುವಷ್ಟು ತಿಳುವಳಿಕೆಯುಂಟಾಗುವದೆಂದು ನನ್ನ ಆತ್ಮವಿಶ್ವಾಸವಿರುವದು.

ಕಾಲನಿರ್ಣಯದ ಪದ್ಧತಿಗಳಲ್ಲಿ ಕೆಲವು ಮಾನ್ಯ ಪದ್ಧತಿಗಳಿರುವವು. ಪರಾಶರೋಕ್ತ ವಿಂಶೋತ್ತರೀ ದಶಾಪದ್ಧತಿ, ಜೈಮಿನಿ ಋಷಿಯ ಚರಪರ್ಯಾಯದಶೆ, ಕಾಲಚಕ್ರದಶೆ, ಸಾಯನವಾದಿಗಳ ದಿನವರ್ಷಪದ್ಧತಿ, ಪ್ರಾಥಮಿಕ ಯೋಗ ಪದ್ಧತಿ ಇತ್ಯಾದಿ. ಅಷ್ಟಕವರ್ಗ ಪದ್ಧತಿ ವಿಂಶೋತ್ತರೀದಶೆಯ ಒಂದು ಪೂರಕ ಪದ್ಧತಿ. ಇಂತಹ ನಕ್ಷತ್ರದಲ್ಲಿ ಶನಿಯ ಸಂಚಾರವಿದ್ದಾಗ ನಿಮಗೆ ಹೊಡೆತ ಬೀಳುವದೆಂದು ಈ ಪದ್ಧತಿ ನಿರ್ದಿಷ್ಟವಾಗಿ ಹೇಳುವದು. ಗಾಬರಿಯಾಗಬಾರದು. ಪಾಶ್ಚಾತ್ಯ ಜ್ಯೋತಿರ್ವಿದರಾದ ಅಲಾನ್‌ಲೀವೋ ಇವರೂ ಕೊನೆಯ ಗುದಿಕೆಯನ್ನು ಕೊಡುವವನು ಆವನು ಎಂದು ಹೇಳುವರು. ಅರ್ಥಾತ್ ಕೊನೆಯ ಕಾರ್ಯ ಅವನದು.

ಆದ್ದರಿಂದಲೇ ಮಾತಂಗರ ಮೇಲೆ ಅವನ ಅಧಿಕಾರವಿರುವದು.

ಗೋಚರ ಗ್ರಹಗಳ ಕಾರ್ಯ ಯಾವಾಗಲೂ ಪೂರಕವಾಗಿರುವದು. ಇದು ಸ್ವತಂತ್ರ ಪದ್ಧತಿಯಲ್ಲ. ದಶಾಂತರ್ದಶಗಳನ್ನು ನೋಡಿದ ಬಳಿಕ ಗೋಚರ ಗ್ರಹಗಳ ಸಮನ್ವಯ ಮಾಡಬೇಕು. ಸಾಯನವಾದಿಗಳು ಕೂಡ ಮೊದಲು ಪ್ರಾಯಮರೀ, ಸೆಕೆಂಡರೀ ಡಿರೆಕ್ಶನ್‌ಗಳನ್ನು ನೋಡಿದ ಬಳಿಕ ಗೋಚರ ಗ್ರಹಗಳನ್ನು ಉಪಯೋಗಿಸಿಕೊಳ್ಳುವರು. ಕಾರಣ ಛಿದ್ರದಶೆ-ಯನ್ನು ನೋಡಿದ ಬಳಿಕ ಶನಿಗೆ ಆಮಂತ್ರಣ ಕೊಡಬೇಕು. ಶುಭಫಲಗಳನ್ನು ಹೇಳುವಾಗಲೂ ಈ ವಿಧಿಯನ್ನು ಅನುಸರಿಸಬೇಕು. ಎಲ್ಲ ಗ್ರಹಗಳಲ್ಲಿ ಸದ್ಗುಣ-ಗಳಿರುವಂತೆ ದುರ್ಗುಣಗಳೂ ಇರುವವು. ಶನಿ ಇರಲಿ, ಗುರು ಇರಲಿ, ೫-೬-೭-೮ ಬಿಂದುಗಳಿಂದ ಕೂಡಿದ ಗ್ರಹವು ನಿಮಗೆ ಶುಭಫಲವನ್ನು ಕೊಡು-ವದು— ಆದ್ದರಿಂದ ಫಲಗಳ ನಿರ್ದಿಷ್ಟತೆಯನ್ನು ಕಂಡುಹಿಡಿಯಲಿಕ್ಕೆ ಈ ಅಷ್ಟಕವರ್ಗ ಪದ್ಧತಿ ಬಹು ಸಹಕಾರಿಯಾಗಿರುವದು.

ಇನ್ನು ಗ್ರಹಗಳಿಂದ ಬಿಂದುನ್ಯಾಸವನ್ನು ಮಾಡುವದು ಲಗ್ನಕುಂಡಲಿ-ಯಿಂದ ಮಾಡಬೇಕೋ ಭಾವಕುಂಡಲಿಯಿಂದಲೋ ಎಂಬ ಬಗ್ಗೆ ವಿದ್ವಾಂಸರಲ್ಲಿ ಮತಭೇದವಿರುವದು. ಕೆಲವು ಮಾನ್ಯ ವಿದ್ವಾಂಸರು ಲಗ್ನಕುಂಡಲಿಯಿಂದಲೇ ಮಾಡಿರುವರು. ಮುಂಬಯಿ ಜ್ಯೋತಿರ್ವಿದರು ಬರೆದ ಅಷ್ಟಕವರ್ಗದ ಪುಸ್ತಕದಲ್ಲಿ ಭಾವಕುಂಡಲಿಯಿಂದ ಮಾಡಬೇಕೆಂದು ಹೇಳಿರುವರು. ನಾನು ಈ ಪುಸ್ತಕದಲ್ಲಿ ಲಗ್ನಕುಂಡಲಿಯಿಂದಲೇ ಮಾಡಿರುವೆನು. ಅನೇಕ ಜಾತಕ-ಗಳು ಸರಿಯಾಗಿ ಬಂದಿವೆ. ಉದಾಹೃತ ಕುಂಡಲಿಯನ್ನು ಮುಂಬಯಿಯ ಜನ್ಮಭೂಮಿಯ ಪಂಚಾಂಗ ಸಂಶೋಧಕರಿಂದ ಹಾಕಿಸಿ ತರಿಸಿದರೂ, ಅವರು ನನ್ನಂತೆ ಲಗ್ನಕುಂಡಲಿಯಿಂದಲೇ ಬಿಂದುವಿನ್ಯಾಸವನ್ನು ಮಾಡಿರುವದರಿಂದ ನಾನು ಮಾಡಿದ್ದು ತಪ್ಪೆಂದು ನನಗೆ ಅನಿಸಲಿಲ್ಲ. ಈ ಪುಸ್ತಕಕ್ಕೆ ಆಧು-ನಿಕ ಸಂಸ್ಕರಣ ಕೊಡುವಾಗ ನನಗೆ ವಾರ್ಧಕ್ಯದ ಮೂಲಕ ಆಲಸ್ಯ-ವುಂಟಾದಾಗ ಪ್ರೂಫ್‌ಕರೆಕ್ಶನ್ನಾದಿಗಳನ್ನು ನೋಡಿದವನು ನನ್ನ ಹಿರಿಯ-ಮಗನು ( H. G. Joshi. B. A. D. B. E. ) ಅವನಿಗೂ ಮನೆತನದ ಪರಂಪರೆಯ ಮೂಲಕ ಈ ಶಾಸ್ತ್ರದ ಪರಿಚಯವು ಸ್ವಾಭಾ-

ವಿಕವಾಗಿ ಉಂಟಾಗಿದ್ದರಿಂದ ನೆರವನ್ನಿತ್ತು ತನ್ನ ಕರ್ತವ್ಯವನ್ನು ನೆರವೇರಿಸಿದನು. ಓರ್ವ ಸದ್ಗೃಹಸ್ಥರು ಪ್ರಕಾಶನಕಾರ್ಯಕ್ಕೆ ಅನರ್ಘ ನೆರವನ್ನಿತ್ತರು. ಮತ್ತು ಜಾಗತಿಕ ಖ್ಯಾತಿಯನ್ನು ಪಡೆದ ಮಾನ್ಯ ವಿದ್ವಾಂಸರಾದ ಬೆಂಗಳೂರಿನ ಬಿ. ವಿ. ರಾಮನ್ನರು ಪ್ರಸ್ತಾವನೆಯನ್ನು ಬರೆದು ಕೊಟ್ಟು ಮಹದುಪಕಾರ ಮಾಡಿದರು. ಅವರ ಸೌಜನ್ಯ, ವಿದ್ವತ್ತೆ ಆದರಣೀಯವಾಗಿರುವದು. ಮುದ್ರಣ ಕಾರ್ಯವನ್ನು ಆಧುನಿಕ ಯುಗಕ್ಕೊಪ್ಪುವಂತೆ ಕಾಳಜಿಯಿಂದ ನೆರವೇರಿಸಿದ ಶ್ರೀ ಮಧುಕರರಾವ ಕಾಮತರೂ; ಮತ್ತು ಇಲ್ಲಿಯ ವಿದ್ವಾಂಸರಾದ ವಿದ್ವದ್ರತ್ನ ಶುಭಾಶಂಸಕ ಪಂಚಮುಖಿಯವರೂ; ಕವಿವರ್ಯ ಬೇಂದ್ರೆಯವರೂ, ಪುಣೆಯ ಟಿಳಕ ಮಹಾರಾಷ್ಟ್ರ ವಿದ್ಯಾಪೀಠದ ಶ್ರೀ ಮಾರ್ತಂಡ ಶಾಸ್ತ್ರಿಗಳು ಸದಭಿಪ್ರಾಯವನ್ನು ವ್ಯಕ್ತಪಡಿಸಿ ನನ್ನನ್ನು ಅಧಮರ್ಣನನ್ನಾಗಿ ಮಾಡಿದರು. ಇವರೆಲ್ಲರೂ 'ಭದ್ರಾಣಿ ಪಶ್ಯಂತು' ಎಂದು ಆ ಜಗಚ್ಚಾಲಕನಲ್ಲಿ ವಿನಮ್ರನಾಗಿ ಪ್ರಾರ್ಥಿಸುವೆನು.

ಜನತೆಯಲ್ಲಿ ಈ ಪುಸ್ತಕಕ್ಕೆ ಮಾನ್ಯತೆ ಸಿಕ್ಕಲ್ಲಿ, ಇನ್ನೂ ಕೆಲವು ಪುಸ್ತಕಗಳನ್ನು ಪ್ರಕಟಿಸುವ ಸಾಹಸವನ್ನು ಕೈಕೊಳ್ಳಬಹುದಾಗಿದೆ. ಅನವಧಾನದಿಂದಾಗಲಿ, ವಾರ್ಧಕ್ಯಸಹಜವಾದ ಆಲಸ್ಯದಿಂದಾಗಲಿ ಸ್ಖಾಲಿತ್ಯವುಂಟಾಗಿದ್ದಲ್ಲಿ ವಿದ್ವಾಂಸರು ಕ್ಷಮಿಸುವರೆಂದು ಕೋರುವೆನು.

**ಗಚ್ಛತಃ ಸ್ಖಲನಂಕ್ವಾಪಿ ಭವತ್ಯೇವ ಪ್ರಮಾದತಃ ।**
**ಹಸಂತಿ ದುರ್ಜನಾಸ್ತತ್ರ ಸಜ್ಜನಾಸ್ತು ದಯಾಲವಃ ।**

ಧಾರವಾಡ
೨೫-೧೨-೫೮

ವಿದ್ವದ್ವಶಂವದ,
**ಹಂ. ಕೇಶವಶರ್ಮಾ ಗಲಗಲಿ.**

# ಅಷ್ಟಕವರ್ಗ ಪದ್ಧತಿ

---

ಸ ಜಯತಿ ಸಿಂಧುರವದನೋ ದೇವೋ ।
ಯತ್ಪಾದಪಂಕಜಸ್ಮರಣಾತ್ ।
ವಾಸರಮಣಿರಿವ ತಮಸಾಂ ।
ರಾಶಿಂ ನಾಶಯತಿ ವಿಘ್ನಾನಾಂ ॥

ಗುರುಭ್ಯಶ್ಚ ಗ್ರಹೇಭ್ಯಶ್ಚ ।
ಮಯಾ ಬದ್ಧೋಽಯಮಂಜಲಿಃ ॥

ಆರೋಗ್ಯಂ ಸವಿತಾ ತನೋತು ಭವತಾ-
ಮಿಂದುರ್ಯಶೋ ನಿರ್ಮಲಂ ।
ಭೂತಿಂ ಭೂಮಿ ಸುತಃ ಸುಧಾಂಶು ತನಯಃ
ಪ್ರಜ್ಞಾಂ ಗುರುರ್ಗೌರವಂ ॥

ಕಾವ್ಯಃ ಕೋಮಲವಾಗ್ವಿಲಾಸಮತುಲಂ
ಮಂದೋ ಮುದಂ ಸರ್ವದಾ ।
ರಾಹುರ್ಬಾಹುಬಲಂ ವಿರೋಧ ಶಮನಂ
ಕೇತುಃ ಕುಲಸ್ಯೋನ್ನತಿಂ ॥

ಪರಾಶರ ಋಷಿಯ ಶಿಷ್ಯ ಮೈತ್ರೇಯನು ಗುರುಗಳಿಗೆ ಪ್ರಶ್ನೆ ಮಾಡುತ್ತಾನೆ. "ಭಗವನ್, ನೀವು ಗ್ರಹಗಳಿಂದ ಭಾವಗಳಿಂದ ಹುಟ್ಟುವ ಫಲಗಳನ್ನು ಹೇಳಿದಿರಿ. ಅದು ಬಹುಜನ ಋಷಿವರ್ಯರಿಗೆ, ಆಚಾರ್ಯರಿಗೆ ಸಮ್ಮತವಾಗಿರುವುದು. ಫಲಗಳ ಸಾಂಕರ್ಯದಿಂದ, ಗ್ರಹಗಳ ಗತಿ–ಸಾಂಕರ್ಯದಿಂದ 'ಇದಮಿತ್ಥಂ' ಎಂದು ನಿರ್ಣಯಿಸಲು ಮಾನವರು ಸಮರ್ಥರಾಗಲಾರರು.

"ಕಲಿಯುಗದಲ್ಲಿ ಪಾಪರತವಾದ ಮಾನವರ ಬುದ್ಧಿಯು ಮಂದ–ವಾಗಿರುವುದು. ಆದ್ದರಿಂದ ಅಲ್ಪಬುದ್ಧಿಯವರಿಗೆ ಗಮ್ಯವಾದ ಶಾಸ್ತ್ರವನ್ನು ಹೇಳಿರಿ. ತಾತ್ಕಾಲಿಕ ಗ್ರಹಸ್ಥಿತಿಯಿಂದ ಮಾನವರಿಗೆ ಪರಿಸ್ಫುಟವಾಗಿ ಸುಖದುಃಖಾದಿಗಳ ಜ್ಞಾನವಾಗುವಂತೆ ತಿಳಿಸಿ ಹೇಳಿರಿ."

ಪರಾಶರರು ನುಡಿಯುತ್ತಾರೆ,

"ನಿನ್ನ ಪ್ರಶ್ನೆ ಚೆನ್ನಾಗಿರುವುದು. ಸಾಂಕರ್ಯಕ್ಕೆ ಅವಿರೋಧ–ವಾಗುವಂತೆ ಶಾಸ್ತ್ರದ ಪ್ರಯೋಜನವನ್ನು ಜನೋಪಕಾರಕ್ಕಾಗಿ ಹೇಳು–ವೆನು. ಸಾವಧಾನದಿಂದ ಕೇಳಬೇಕು.

"ಲಗ್ನದಿಂದ ವ್ಯಯ ಪರ್ಯಂತ ೧೨ ಭಾವಗಳು ಸಂಜ್ಞಾನುರೂಪ–ವಾಗಿ ಫಲವನ್ನು ಕೊಡುವವು. ಶುಭಗ್ರಹಗಳಿಂದ ಯುಕ್ತನಾದ, ದೃಷ್ಟನಾದ ಭಾವಗಳ ಒಳ್ಳೆ ಫಲವನ್ನು ಕೊಡುವುವು. ಉಚ್ಚಾದಿ ಗ್ರಹ–ಗಳು ಉತ್ತಮ ಫಲವನ್ನು ಕೊಡುವವು. ಅಸ್ತವಾಗಿರುವ, ಶತ್ರುಕ್ಷೇತ್ರ–ದಲ್ಲಿರುವ, ನೀಚದಲ್ಲಿರುವ ಗ್ರಹಗಳೂ ಪಾಪಗ್ರಹಗಳೂ ಆ ಭಾವದಲ್ಲಿದ್ದರೆ ಕಲ್ಯಾಣವನ್ನುಂಟುಮಾಡಲಾರವು. ಮಿತ್ರ ಸ್ವಕ್ಷೇತ್ರದಲ್ಲಿರುವ ಗ್ರಹಗಳು ಶುಭವನ್ನುಂಟು ಮಾಡುವವು. ಹೀಗೆ ಸಾಮಾನ್ಯವಾಗಿ ಹೋರಾ ಶಾಸ್ತ್ರಜ್ಞ ಸೂರಿಗಳು ಹೇಳುವರು.

"ಪೂರ್ವಾಚಾರ್ಯರನ್ನನುಸರಿಸಿ ನಾನು ಇದನ್ನೆಲ್ಲ ನಿಮಗೆ ಹೇಳು–ವೆನು. ಆಯುಷ್ಯನಿರ್ಣಯ, ಲೋಕಯಾತ್ರೆ ಈ ಶಾಸ್ತ್ರದ ಪ್ರಯೋಜನ. ಇವನ್ನು ನಿರ್ಣಯಿಸುವುದು ವಶಿಷ್ಠ, ಬೃಹಸ್ಪತಿಗಳಿಗೂ ಅಸಾಧ್ಯ.

ಮಾನವರೇನು ಮಾಡಬಲ್ಲರು ?— ವಿಶೇಷವಾಗಿ ಕಲಿಯುಗದಲ್ಲಿ ಹುಟ್ಟಿದವರು.

"ಸಾಮಾನ್ಯಾಂಶ, ವಿಶೇಷಾಂಶ ಹೀಗೆ ಜ್ಯೋತಿಃಶಾಸ್ತ್ರವು ಎರಡು ವಿಧವಾಗಿರುವುದು. ಸಾಮಾನ್ಯ (General) ಭಾಗವನ್ನು ಹೇಳಿರುವೆನು. ಇನ್ನು ವಿಶೇಷಾಂಶವನ್ನು ಹೇಳುವೆನು."

"ಹೇಗೆ ಲಗ್ನದಿಂದ, ಚಂದ್ರನಿಂದ ಭಾವದ ಫಲವನ್ನು ಹೇಳುವರೋ ಹಾಗೆ ಉಳಿದ ಗ್ರಹಗಳಿಂದಲೂ ದೈವಜ್ಞರು ವಿಚಾರಿಸಬೇಕು.

"ಆದ್ದರಿಂದ ರವಿಯಿಂದ ಕೂಡಿ ಏಳು ಗ್ರಹಗಳು, ಲಗ್ನ, ಹೀಗೆ ೮ರ ಭಾವ ಫಲಗಳನ್ನು ಪೃಥಕ್ ಪೃಥಕ್ ಶುಭಾಶುಭವನ್ನು ಹೇಳಬೇಕು." ಇದುವೆ 'ಅಷ್ಟಕವರ್ಗ ಪದ್ಧತಿ'.

ಜನ್ಮಕುಂಡಲಿಯಲ್ಲಿ ೭ ಗ್ರಹಗಳ ಸ್ಥಿತಿ, ಲಗ್ನ ಇವು ಸ್ಥಿರವಾಗಿ ಇರುವವು. ಅವುಗಳ ಶುಭಾಶುಭ ಫಲಗಳನ್ನು ಪರಸ್ಪರ ಸಂಬಂಧದಿಂದ ತಿಳಿಯಕೊಳ್ಳಬೇಕು. 'ಅಷ್ಟಕವರ್ಗ' ಪದ್ಧತಿಯಲ್ಲಿ ಒಂದು ಗ್ರಹವು ಪರಮಾವಧಿ ೮ ಬಿಂದುಗಳನ್ನು ಪಡೆಯುವದು. ಗ್ರಹವು ಈ ಸಂಬಂಧದಲ್ಲಿ ಅಶುಭ ಸ್ಥಿತಿಯಲ್ಲಿದ್ದರೆ, ೮ ರೇಖೆಗಳನ್ನು ಪಡೆಯುವದು.

ಹೋರಾಮಕರಂದಕಾರನು ಹೇಳುತ್ತಾನೆ :

ಯದ್ಗೋಚರೇ ಜನ್ಮಗ್ರಹಾದ್ ಗ್ರಹಾಣಾಂ ।
ಸ್ಯಾತ್ ಜನ್ಮರಾಶಿಂ ಸಮುದಾಹರಂತಿ ॥

ಯಥಾ ತಥಾ ಯೇಷು ಗಗಾಃ ಫಲಗ್ನಾಃ
ಸ್ಥಿತಾ ನತೇ ಸಪ್ತಕತೋ ಭವಂತಿ ॥

ಅತೋಂಗ ರಾಶಿಃ ಮನುಜೋತ್ರ ಸರ್ವಃ ।
ಪ್ರೋಕ್ತೋತ್ರ ತೇಭ್ಯಶ್ಚ ಶುಭಾಶುಭಾನಿ ॥

ಫಲಾನಿ ತೇಷಾಂ ಚ ವಿಯೋಗ ಯೋಗಾಃ ।
ಯದಾಷ್ಟವರ್ಗೋತ್ಥ ಫಲಂ ಸ್ಫುಟಂ ಸ್ಯಾತ್ ।

ಇದರಿಂದ ಚಂದ್ರರಾಶಿ ತಿಳಿದರೆ ಸಾಕು. ಮೇಲ್ಗಾಡಿಯಂತೆ ಭರದಿಂದ ಭವಿಷ್ಯವನ್ನು ಹೇಳುವ ಜ್ಯೋತಿಷಿಗಳ ವ್ಯರ್ಥತೆ ತಿಳಿದು ಬರುವದು.

ಗೋಚರ ಗ್ರಹಗಳಿಂದ ಫಲವನ್ನು ಹೇಳುವದಾದರೆ ಅಷ್ಟಕ ವರ್ಗದಿಂದಲೇ ಹೇಳುವದು ಉಚಿತ. ಅದರ ಪ್ರಸಾಧನ ರೀತಿ ಈ ಪುಸ್ತಕದಲ್ಲಿರುವದು.

**ಉದಾಹರಣಕುಂಡಲಿ :**

**ಜನ್ಮ ದಿನಾಂಕ ೧೬-೩-೧೯೦೪**

ಜನ್ಮ ಸ್ಥಳದ ರೇಖಾಂಶ ೭೫.೪೫; ಸೂರ್ಯೋದಯದಿಂದ ೧೨ ಗಳಿಗೆ ೨ ಪಳ;

ಅಕ್ಷಾಂಶ—೧೫-೩೫

೯-೧೦ ರ ಅಧಿಪತಿ ಶನಿ ೧೧ರಲ್ಲಿ. ಚತುರ್ಥಾಧಿಪ ರವಿಯುಕ್ತ, ವೃಷಭ ಲಗ್ನಕ್ಕೆ ರವಿ-ಶನಿ ಯೋಗವು ಯೋಗಕಾರಕವಾಗುವದು. ಸಿಂಹರಾಶಿಗೆ ಭಾಗ್ಯದಲ್ಲಿ ನವಮ- ದಶಮಾಧಿಪಯೋಗ, ಧರ್ಮ – ಕರ್ಮಾಧಿಪಯೋಗ, ಮಂ. ಶು. ಯೋಗವಿರುವದು. ದೇವಕೇರಲವೆಂಬ ನಾಡೀ ಗ್ರಂಥವು ಹೇಳುವದೇನಂದರೆ : ಶನಿ ನವಮದಶಮಾಧಿಪತಿ ಇದ್ದು ೩ ಬಿಂದುಗಳಿಂದ ಯುಕ್ತನಾಗಿದ್ದರೂ ೩-೬-೧೧ ರಲ್ಲಿದ್ದರೆ ರಾಜಯೋಗ ಫಲವನ್ನು ಕೊಡುವದು. ಉದಾಹೃತ ಕುಂಡಲಿಯಲ್ಲಿ ವೃಷಭ ಲಗ್ನವಿದ್ದು ಶನಿ ನವಮದಶಮಾಧಿಪತಿ ಇರುವನು. ೧೧ ರಲ್ಲಿ ೪ ಬಿಂದುಗಳಿಂದ ಕೂಡಿರುವನು. ವೃಷಭ ಲಗ್ನಕ್ಕೆ ಮಾತ್ರ ಈ ಯೋಗದ ಸಂಬಂಧ ಬರುವದು.

## ಜನ್ಮ ಕುಂಡಲಿ (ನಿರಯನ)




## ಭಾವಗಳು

ಕುಂಡಲಿಯಲ್ಲಿ ೧೨ ಮನೆಗಳಿರುವವು. ಇವಕ್ಕೆ ಭಾವ ಅಥವಾ ಭವನವೆಂಬ ಹೆಸರು. ಭಾವ-ಭವನಗಳಲ್ಲಿ ಸೂಕ್ಷ್ಮ ಭೇದವಿರುವದು. ಜೈಮಿನಿ ಪದ್ಧತಿಯಲ್ಲಿ ಈ ಭೇದವನ್ನು ಲಕ್ಷಿಸಿಲ್ಲ. ಪರಾಶರ, ಶ್ರೀಪತಿಗಳು ಸೂಕ್ಷ್ಮ ವಿಚಾರದಲ್ಲಿ ಅದನ್ನು ಗಣನೆಗೆ ತಕ್ಕೊಳ್ಳುವರು. ದ್ವಾದಶಭಾವಗಳಿಂದ ವಿಚಾರಿಸುವ ಸಂಗತಿಗಳು :

೧ ಮೂರ್ತಿರ್ಶರೀರ ಸಂಪತ್ತಿಃಅಂಗೋಪಾಂಗ-
ನಿರೂಪಣಂ ।

ಲಗ್ನದಿಂದ ಶರೀರ ಸಂಪತ್ತಿಯನ್ನು, ಅಂಗೋಪಾಂಗಗಳ ನಿರೂಪಣ-ವನ್ನು ಮಾಡುವರು.

೨ ಸತ್ಯ ಸೌಭಾಗ್ಯವಿತ್ತಂ ಚ ದ್ವಿತೀಯ ಸ್ಥಾನತೋ ವಿದುಃ ।

ಸತ್ಯ, ಸೌಭಾಗ್ಯ, ಧನಾದಿಗಳನ್ನು ೨ನೆಯ ಭಾವದಿಂದ ವಿಚಾರಿಸುವರು.

೩ ಸ್ವರಂ ಸತ್ವಂ ವಿಕ್ರಮಂ ಚ ಭ್ರಾತೃ ಸ್ಥಾನಂ
ತೃತೀಯಕೇ ।

ಸ್ವರ, ಸತ್ವ, ಪರಾಕ್ರಮ ಸಹೋದರಾದಿಗಳನ್ನು ೩ನೆಯ ಭಾವದಿಂದ ವಿಚಾರಿಸುವರು.

೪ ಸುಖಂ ಬಂಧುಗೃಹಂ ಚೈವ ಮಾತೃಚಿಂತಾ
ಚತುರ್ಥಕೇ ।

ಸುಖ, ಬಂಧು, ಮನೆ, ತಾಯಿ ಇವರ ವಿಚಾರವನ್ನು ಚತುರ್ಥದಿಂದ ಮಾಡುವರು.

೫ ಸ್ವಭಾವಂ ಬುದ್ಧಿವಿಸ್ತಾರಂ ಸುತಸ್ಥಾನಂ
ಚ ಪಂಚಮೇ ।

ಸ್ವಭಾವ, ಬುದ್ಧಿವಿಸ್ತಾರ, ಮಕ್ಕಳು ಇವುಗಳ ವಿಚಾರವನ್ನು ಪಂಚಮದಿಂದ ಮಾಡುವರು.

೬ ಜ್ಞಾತಿ ಶತ್ರು ಕ್ಷತಾದೀನಾಂ ಶತ್ರುಸ್ಥಾನೇ
ನಿರೀಕ್ಷಯೇತ್ ।

ತಾಯಿಯ ಬಂಧುಗಳು (ಮಾತುಲ), ರಿಪು, ಗಾಯ ಇವುಗಳ ವಿಚಾರವನ್ನು ೬ನೆಯ ಭಾವದಿಂದ ಮಾಡುವರು.

೭ ಪ್ರವಾಸಂ ದಾರಸೌಭಾಗ್ಯಂ ಸಪ್ತಮ-
ಸ್ಥಾನಕೋ ವಿದುಃ ।

ಪ್ರವಾಸ, ಹೆಂಡತಿಯ ಸೌಭಾಗ್ಯ ಇವುಗಳನ್ನು ೭ನೆಯ ಭಾವದಿಂದ ವಿಚಾರಿಸುವರು.—ಕಲತ್ರ ವಿಚಾರ.

೮ ಆಧಿಂ ವ್ಯಾಧಿಂ ಮೃತಿಂ ನಾಶಮಷ್ಟಮೇ
ಪರಿಚಕ್ಷತೇ ।

ಮನಸ್ಸಿನ ಬೇನೆ, ಶಾರೀರಿಕ ಬೇನೆ, ಮರಣ, ವಿನಾಶ ಇವುಗಳನ್ನು ೮ನೆಯ ಭಾವದಿಂದ ವಿಚಾರಿಸುವರು.

**೯ ಭಾಗ್ಯಸ್ಥಾನಂ ಗುರುಸ್ಥಾನಂ ಧರ್ಮಸ್ಥಾನಂ**
**ಚ ತದ್ವಿದುಃ ।**

ಭಾಗ್ಯೋದಯ, ಗುರುಗಳು, ಧರ್ಮ ಇವುಗಳ ವಿಚಾರವನ್ನು ನವ-ಮದಿಂದ ಮಾಡುವರು.

**೧೦ ಕರ್ಮವೃತ್ತಿಂ ತು ದಶಮೇ ಪ್ರತಾಪಂ**
**ಪೌರುಷಂ ಶ್ರುತಿಃ ।**

ಕರ್ಮ, ಉಪಜೀವನ ಸಾಧನ, ಪ್ರತಾಪ, ಪೌರುಷ, ಖ್ಯಾತಿ, ಕೀರ್ತಿ ಇವುಗಳನ್ನು ದಶಮಭಾವದಿಂದ ವಿಚಾರಿಸುವರು. ಈ ಭಾವದ ಬಗ್ಗೆ ವರಾಹಮಿಹಿರಾಚಾರ್ಯರು ಕರ್ಮಾಜೀವವೆಂಬ ಒಂದು ಅಧ್ಯಾಯ-ವನ್ನೇ ಬರೆದಿರುವರು.

**೧೦ ಕೀರ್ತಿಶ್ಚ ಜಾಯತೇ ತತ್ರ ದೃಷ್ಟಾದೃಷ್ಟ**
**ನಿರೂಪಣಂ ।**

ದಶಮಭಾವದಿಂದ ಕೀರ್ತಿಯನ್ನು, ದೃಷ್ಟ–ಅದೃಷ್ಟಗಳ ನಿರ್ಣಯವನ್ನು ಮಾಡುವರು.

**೧೧ ಐಶ್ವರ್ಯಾರ್ಥಲಾಭಂ ಚ ಏಕಾದಶ**
**ಗೃಹಾತ್ ಫಲಂ ।**

ಐಶ್ವರ್ಯ, ಧನಲಾಭ, ಇವುಗಳನ್ನು ಏಕಾದಶದಿಂದ ಹೇಳುವರು.

**೧೨ ದ್ವಾದಶಂ ವ್ಯಯಸ್ಥಾನಂ ಪಾಪಸ್ಥಾನಂ ಪ್ರಚಕ್ಷತೇ ।**
**ಶರೀರನಾಶಂ ದೇಹಂ ಚ ವ್ಯಯಸ್ಥಾನೇ ವಿಚಿಂತಯೇತ್ ।**

ಖರ್ಚು, ಪಾಪ, ದೇಹನಾಶ, ಮೋಕ್ಷ ಮೊದಲಾದವುಗಳನ್ನು ೧೨ನೆಯ ಸ್ಥಾನದಿಂದ ಹೇಳುವರು.

ಪಾಪಾನ್ವಿತ ಭಾವಗಳು ನಾಶವನ್ನು ಹೊಂದುವವು. ಸೌಮ್ಯ ಗ್ರಹಯುತ ಭಾವಗಳು ಸಿದ್ಧಿಯನ್ನು ಪಡೆಯುವವು. ಸೌಮ್ಯ ಪಾಪ-ಗಳಿಂದ ಯುತವಾದವು ಮಿಶ್ರ ಫಲವನ್ನು ಕೊಡುವವು.

**ಷಷ್ಠಾಷ್ಟಮ ವ್ಯಯಸ್ಥೈಶ್ಚ ವಿಪರೀತಂ ಶುಭಾಶುಭೈಃ ।**
**ಮಿತ್ರೋಚ್ಚ ಭವನಸ್ಥಶ್ಚೇತ್ ಪಾಪೋಽಪಿ ಶುಭಮೃಚ್ಛತಿ ।**

ಪಾಪಗ್ರಹವಾದರೂ ಮಿತ್ರ, ಸ್ವಗೃಹ ಉಚ್ಚದಲ್ಲಿದ್ದರೆ ಶುಭಫಲವನ್ನೇ ಕೊಡುವದು.

**ಅರಿ ನೀಚ ಗತೋಽಮೂಢಃ ಶುಭೋಽಪಿ ಕ್ರೂರ-**
**ತಾಮಿಯಾತ್ ।**

ಶತ್ರುಗ್ರಹಸ್ಥಿತ, ನೀಚಸ್ಥಿತ, ಮೌಢ್ಯಾವಸ್ಥೆಯಲ್ಲಿದ್ದ ಶುಭಗ್ರಹವು ಕೂಡ ಕ್ರೂರನಾಗುವದು. ಇದನ್ನೆಲ್ಲ ವಿಚಾರಿಸಿ ಫಲಿತ ಹೇಳಬೇಕು.

## ಗ್ರಹಗಳ ಕಾರಕತ್ವ

**ರವಿ :- ಆತ್ಮ ಪ್ರಭಾವಶಕ್ತಿಶ್ಚ ಪಿತೃಚಿಂತಾ ರವೇಃ ಫಲಂ ।**

ಆತ್ಮಪ್ರಭಾವ, ಶಕ್ತಿ, ಪಿತೃಸ್ಥಿತಿ ಇವುಗಳ ವಿಚಾರವನ್ನು ರವಿ-ಯಿಂದ ಮಾಡುವರು.

**ಚಂದ್ರ : ಮನೋಬುದ್ಧಿ ಪ್ರಸಾದಂ ಚ ಮಾತೃಚಿಂತಾ**
**ಮೃಗಾಂಕತಃ ।**

ಮನಸ್ಸು, ಬುದ್ಧಿ, ಪ್ರಸಾದ, ತಾಯಿ ಇವರ ವಿಚಾರವನ್ನು ಚಂದ್ರ ನಿಂದ ಮಾಡುವರು.

**ಮಂಗಳ : ಭ್ರಾತೃ ಸತ್ವಂ ಗುಣಂ ಭೂಮಿಂ ಭೌಮೇನ**
**ವಿಚಿಂತಯೇತ್ ।**

ಸಹೋದರರ ಸತ್ವ, ಹುಟ್ಟುಗುಣ, ಭೂಮಿ ಇವುಗಳ ವಿಚಾರವನ್ನು ಮಂಗಳನಿಂದ ಮಾಡುವರು. (ಸತ್ವಂ ಕುಜಃ)

**ಬುಧ : ಪ್ರಜ್ಞಾ ವಾಗ್ (ವಾಣಿ) ಧರ್ಮ ವಿಜ್ಞಾನಂ**
**ಬುಧೇನ್ಯೈ–ವಿಚಿಂತಯೇತ್ ।**

ಪ್ರಜ್ಞಾ, ವಾಕ್, ಧರ್ಮವಿಜ್ಞಾನ ಇವುಗಳನ್ನು ಬುಧನಿಂದ ವಿಚಾರಿಸಬೇಕು.

**ಗುರು : ಗುರುಣಾ ದೇಹಪುಷ್ಟಿಂ ಚ ಬುದ್ಧಿ ಪುತ್ರಾರ್ಥ**
**ಸಂಪದಃ ।**

ಗುರುವಿನಿಂದ ದೇಹಪುಷ್ಟಿ, ಬುದ್ಧಿ, ಪುತ್ರ, ಅರ್ಥಸಂಪತ್ತನ್ನು ವಿಚಾರಿಸಬೇಕು. ಇವುಗಳ ಕಾರಕತ್ವ ಇವನ ಕಡೆಗಿರುವದು.

**ಶುಕ್ರ : ಶುಕ್ರಂ ವಿವಾಹ ಕವರ್ಣಣಿ ಭೋಗಸ್ಥಾನಂ ಚ**
**ವಾಹನಂ । ವೇಶ್ಯಾಸ್ತ್ರೀಜನಗಾತ್ರಾಣಿ ಶುಕ್ರೇಣೈವ**
**ನಿರೀಕ್ಷಯೇತ್ ।**

ವಿವಾಹ ಶೌರ್ಯ, ಭೋಗಸ್ಥಾನ, ವಾಹನ ವೇಶ್ಯೆಯರು, ಸ್ತ್ರೀ–ಮಿತ್ರರು, ಸ್ತ್ರೀಯರ ಗಾತ್ರ ಇವುಗಳನ್ನು ಶುಕ್ರನಿಂದ ವಿಚಾರಿಸುವರು.

**ಶನಿ : ಆಯುಷ್ಯಂ ಜೀವನೋಪಾಯಂ ದುಃಖಶೋಕ**
**ಮಹದ್ಭಯಂ**
**ಸರ್ವಕ್ಷಯಂ ಚ ಮರಣಂ ಮಂದೇನೈವ**
**ವಿಚಿಂತಯೇತ್ ।**

ಆಯುಷ್ಯ, ಜೀವನೋಪಾಯ, ದುಃಖ, ಶೋಕ, ಮಹಾಭಯ, ಸರ್ವನಾಶ, ಮರಣ ಇವುಗಳನ್ನು ಶನಿಯಿಂದ ವಿಚಾರಿಸುವರು.

ಗ್ರಹಗಳು ಬಲಹೀನವಾಗಿದ್ದರೆ ಗ್ರಹೋಕ್ತ ಫಲಗಳು ದೊರೆಯ–ಲಾರವು. ಶನಿಯ ಫಲ ವಿಪರೀತ. ತಮ್ಮ ತಮ್ಮ ಇಷ್ಟ ವರ್ಗಗಳಲ್ಲಿ ಫಲಗಳನ್ನು ಹೇಳಬೇಕು. ಅಷ್ಟವರ್ಗವು ತಿಳಿಯದೆ ಗ್ರಹಬಲವು ಪೂರ್ಣ ತಿಳಿಯಲಾರದು. ದಶಾಫಲವನ್ನು ಇದರಿಂದ ಹೇಳಬಹುದು.

ಭಾವಫಲವನ್ನು ಹೇಳುವಾಗ ಆ ಭಾವವನ್ನೇ ಲಗ್ನವೆಂದು ಕಲ್ಪಿಸಿ

ಆ ಭಾವಕ್ಕೆ ಸಂಬಂಧಿಸಿದ ಫಲಗಳನ್ನು, ಅಲ್ಲಿಂದ ದ್ವಾದಶ ಭಾವಗಳನ್ನು ಎಣಿಸಿ ಹೇಳುವರು. ಇದರಂತೆ ತಂದೆ, ತಾಯಿ, ಸಹೋದರ, ಮಾತುಲ, ಸುತ, ಪತಿಯು ಭೃತ್ಯ, ಸೂರ್ಯಾದಿ ಗ್ರಹಸ್ಥಿತ ರಾಶಿಯಿಂದ ಗುಣಿಸಿ ಎಣಿಸಿ ಹೇಳುವರು.

ಸೂರ್ಯಸ್ಥಿತ ರಾಶಿಯಿಂದ ಜನಕನ ಸ್ವರೂಪವನ್ನು, ದ್ವಿತೀಯ ಭಾವದಿಂದ ಆತನ ಧನವನ್ನು, ಅವನ ಸಹೋದರರು, ಅವನ ಗುಣಗಳನ್ನು ಅವನಿಂದ ತೃತೀಯ ಭಾವದಿಂದ, ಅವನ ಸುಖವನ್ನು ರವಿಯ ಚತುರ್ಥ ದಿಂದ, ರವಿಯ ಪಂಚಮದಿಂದ ಬುದ್ಧಿಪ್ರಮಾದ, ೬ ರಿಂದ ಪೀಡಾ ಪಿತೃದೋಷ ಶತ್ರು ರೋಗ, ೭ ರಿಂದ ಕಾಮ ಮದ, ೮ ರಿಂದ ದುಃಖ ಮೃತ್ಯುಗಳನ್ನು, ಆಯುಷ್ಯವನ್ನು, ೯ ರಿಂದ ಪುಣ್ಯ-ಧರ್ಮಗಳನ್ನು ಅವನ ತಂದೆಯನ್ನು; ೧೦ ರಿಂದ ಅವನ ವ್ಯಾಪಾರ ಕರ್ಮ. ೧೧ ರಿಂದ ಅವನ ಲಾಭ, ೧೨ ರಿಂದ ಅವನ ಕ್ಷಯ. ಇದರಂತೆ ತಾಯಿಯ ಭವಿತವ್ಯವನ್ನು ಚಂದ್ರನಿಂದ ಹೇಳಬೇಕು.

ತಾಯಿ, ಸಹೋದರ, ತಂದೆ ಇವರ ಭವಿತವ್ಯವನ್ನು ಆಯಾ ಭಾವಗಳಿಂದಲೂ ಕಾರಕ ಗ್ರಹಗಳಿಂದಲೂ ಹೇಳಬೇಕು. ಆ ಭಾವಾಧಿಪತಿ, ಕಾರಕ ಗ್ರಹ ವೀರ್ಯದಿಂದ ಕೂಡಿದ್ದರೆ, ಆ ಭಾವಕ್ಕೆ ಸೌಖ್ಯವುಂಟು. ಕಾರಕ ಗ್ರಹವು ಆ ಭಾವದಲ್ಲಿದ್ದರೆ ನ್ಯೂನಬಲವೆಂದು ಕೆಲವರು ಹೇಳುವರು. ಇದನ್ನು ಅನ್ಯರು ಒಪ್ಪುವದಿಲ್ಲ.

ಅಷ್ಟಕವರ್ಗದಲ್ಲಿ ಯಾವ ಭಾವವು ೮ ಬಿಂದುಗಳಿಂದ ಕೂಡಿರುವದೋ ಅದು ಆ ಭಾವಕ್ಕೆ ಒಳ್ಳೇ ಪುಷ್ಟಿಯನ್ನು ಕೊಡುವದು. ೭-೬-೫ ಬಿಂದುಗಳಿಂದ ಶುಭಫಲ ಪ್ರಾಪ್ತಿ. ೩-೨-೧ ಬಿಂದುಗಳಿದ್ದರೆ ಶುಭವಲ್ಲ. ೪ ಬಿಂದುಗಳಿಂದ ಮಿಶ್ರಫಲ; ಸುಖ-ದುಃಖ ಸಮಾನ. ಶೂನ್ಯ ಬಿಂದು ಇದ್ದರೆ ರೋಗ, ಅಪವಾದ, ಭಯ.

ಫಲದೀಪಿಕೆಯಲ್ಲಿಯೂ ಇದರ ವಿವರವಿರುವದು.

**೮ ಕರೋತಿ ನಾನಾಪಥರೋಗ ದುಃಖ ಭಯಾಟಿ**

ನಾದೀನಿ ಚ ಸ್ತೈಕ ಬಿಂದುಃ ।

೨ ದ್ವಿಕೋ ಮನಸ್ತಾಪ ಸ್ವಕಾಲಚೋರೋಗ್ರಕೃಶಾ ಪವಾದಾ
ಶನ ನಾಶನಾನಿ ।

೩ ತ್ರಿಕಸ್ತು ಸಂಚಾರಕೃಶಾನಲಂಬ ಕಲೇವರ
ವ್ಯಾಕುಲ ಮಾನಸಾನಿ ।

೪ ಸುಖಾಸುಖಾರ್ಥ ವ್ಯಯ ನಿತ್ಯಲಾಭ
ಫಲಪ್ರದಃ ಸಾಗರ ಬಿಂದುಕಃ ಸ್ಯಾತ್ ।

೫ ಸದ್ವಸ್ತ್ರಲಾಭ ಸುತಲಾಲನ ಸಾಧುಸಂಗ
ವಿದ್ಯಾರ್ಧನಾನಿ ಕುರುತೇ ಶರಸಂಖ್ಯಬಿಂದುಃ ।

೬ ಷಟ್‌ಬಿಂದುಕಸ್ತು ನವಮೋಹನ ರೂಪ ಶೀಲ
ಸಂಗ್ರಾಮಜಿತ್ ಧನಯಯೋಬಲವಾಹನಾನಿ ।

೭ ಸಸಪ್ತಬಿಂದುಸ್ತುರಗಾದಿಯಾನ ಸೇನಾಧನ
ಪ್ರಭವ ಶೋಭನಾನಿ ।

೮ ಬಿಂದ್ವಷ್ಟಕಃ ಸರ್ವ ಗುಣಾಭಿರಾಮ
ರಾಜಪ್ರತಾಪಂ ಪ್ರಕಟೀ ಕರೋತಿ ।
ಶರಾದಿ ಬಿಂದು ಸ್ಥಿತರಾಶಿಯಾತಃ
ಸ್ವಕೀಯವರ್ಗೇ ಶುಭದಸ್ತು ನಿತ್ಯಂ ।
ಅತೋನ್ಯಥಾ ಚೇತ್‌ಫಲಪ್ರದಾನಾ
ಗೋಚಾರತಃ ಶೂನ್ಯಫಲೇ ಪ್ರವಾಧಿಃ ।

೫-೬-೭-೮ ಬಿಂದುಗಳಿರುವ ರಾಶಿಯಲ್ಲಿ ಆ ಗ್ರಹವು ಗೋಚಾರದಿಂದ ಬಂದಾಗಲೂ ಶುಭಫಲವನ್ನು ಕೊಡುತ್ತದೆ. ಅನ್ಯಥಾ ಇದ್ದರೆ ಫಲವಿಲ್ಲ. ಶೂನ್ಯಬಿಂದು ಇದ್ದಲ್ಲಿ ಬಂದರೆ ನಿಮ್ಮನ್ನು ಪೀಡಿಸುವದು, ಕಡೆದು ಬಿಡುವದು, ಫಜೀತಿ ಮಾಡುವದು.

೦ ಪೀಡಾ, ೧ ನಾಶ, ೨ ವ್ಯಯ, ೩ ಭೀತಿ, ೪ ಅರ್ಥ, ೫ ನಾರೀ, ೬ ಶ್ರೀ, ೭ ರಾಜ್ಯ ೮ ಸಿದ್ಧಿ—ಇವು ಬಿಂದು ಫಲಗಳು.

ಉಚ್ಚಮಿತ್ರ ಗ್ರಹಗಳು ಕೂಡ ಕಡಿಮೆ ಬಿಂದುಗಳಿದ್ದರೆ ಹೆಚ್ಚಿನ ಶುಭಫಲವನ್ನು ಕೊಡಲಾರವು. ಶುಭಗ್ರಹವಿರಲಿ, ಪಾಪಗ್ರಹವಿರಲಿ ತನ್ನ ಅಷ್ಟಕವರ್ಗದಲ್ಲಿ ಹೆಚ್ಚಿನ ಬಿಂದುಗಳಿರುವ ಭವನದಲ್ಲಿ ಸಂಚಾರ ಮಾಡು-ವಾಗ ಅದು ಶುಭಫಲವನ್ನೇ ಕೊಡುವದು.

ಕಾರಕ ಗ್ರಹದಿಂದ ಎಣಿಸಿ ನೋಡಿದರೂ ಈ ಫಲವು ಪ್ರತೀತಿಗೆ ಬರುವದು. ಉದಾಹೃತ ಕುಂಡಲಿಯಲ್ಲಿ ಗುರುವಿನ ಅಷ್ಟಕ ವರ್ಗದಲ್ಲಿ ಗುರುವಿದೀದ ೧೧ ನೆಯ ಮನೆಯಲ್ಲಿ ೭ ಬಿಂದುಗಳಿರುವವು. ಅಲ್ಲಿ ವೃಷಭ ರಾಶಿಯಿರುವದು. ವೃಷಭ ರಾಶಿಗೆ ಗುರು ಬಂದಾಗ, ಗುರು ಮಕ್ಕಳ ಕಾರಕ-ಅವನಿಂದ ಲಾಭದಲ್ಲಿ ಗುರು ಬರುವನು. ೧೯೬೪-೬೫ ಇಸವಿಯಲ್ಲಿ ಮಕ್ಕಳಿಗೆ ಲಾಭ. ಅವರ ಆಕಾಂಕ್ಷಾಪೂರ್ತಿ ಮೊದಲಾದವುಗಳನ್ನು ಕೊಡುವದು.

## ಲಗ್ನ ಶುದ್ಧಿ

**ಜನ್ಮ ದಿನಾಂಕ :— ೧೬-೩-೧೯೦೮**

ಸೂರ್ಯೋದಯದಿಂದ ೧೨ ಗಳಿಗೆ ೨ಪಳ.

ಮದ್ರಾಸದ **ಆರ್. ಗೋಪಾಲ ಕೃಷ್ಣರಾವ** ಇವರು ತಮ್ಮ ನಾಡೀ ಎಸ್ಟ್ರಾಲಾಜೀ ಪುಸ್ತಕದಲ್ಲಿ ಕೊಟ್ಟ ರೀತಿಯಂತೆ.

— ಗಳಿಗೆ ಪಳಗಳಿಗೆ ೬ ರಿಂದ ಗುಣಿಸಬೇಕು.

| | |
|---|---|
| ೧೨ — ೨<br>× ೬ | |
| ೭೨ — ೧೨<br>ಸೌರ ದಿನಾಂಕ +೪ | ತದನಂತರ ಸೌರ ದಿನಾಂಕವನ್ನು |
| ೭೬— ೧೨ ಬರುವದು. | ಕೂಡಿಸಬೇಕು. |

ಇದಕ್ಕೆ ೩೦ ರಿಂದ ಭಾಗಿಸಬೇಕು.

೩೦ ) ೭೬–೧೨( ೨ ಭಾಗಾಕಾರ ೨ ಬರುವದು.
೬೦
೧೬–೧೨ ಶೇಷ ೧೬–೧೨ ಬರುವದು.

ರವಿ ರಾಶಿಯಿಂದ ಎಣಿಸಬೇಕು. ರವಿ ಜನ್ಮಕುಂಡಲಿಯಲ್ಲಿ ಮೀನ–ದಲ್ಲಿರುವನು. ೨ನೆಯ ರಾಶಿ ಮೇಷ. ಮೇಷ ಮುಗಿದ ಮೇಲೆ ಶೇಷ ೧೬–೧೨; ೧೭ನೆಯ ಅಂಶ ವೃಷಭ ಉದಿತನಾಗಿದೆ ಎಂದು ಅರ್ಥ. ಲಗ್ನವು ವೃಷಭವಿದ್ದು ವೃಷಭಾಂಶದಲ್ಲಿರುವದು. ವರ್ಗೋತ್ತಮ ಲಗ್ನವದೆ.

ಜನ್ಮಕಾಲ ಘಟಿ ಪಳಗಳನ್ನು ೩ ರಿಂದ ಗುಣಿಸಿ ೭ ರಿಂದ ಭಾಗಿಸಲು ವಾರ ಬರುವದು.

೧೨—೨
× ೩
೭) ೩೬—೬ (೫
೩೫
೧—೬ ೧ ಮೇಲೆ ಶೇಷ ಉಳಿಯುವದು.

ರವಿವಾರ ಮುಗಿದು ೨ನೆಯ ವಾರ ಸೋಮವಾರ ಬರುವದು. ಮಾರ್ಚ ೧೬ನೆಯ ದಿನಾಂಕ ಸೋಮವಾರ ಇರುವದು. ಶೇಷವನ್ನು ಶುಕ್ರವಾರ–ದಿಂದಲೂ ಎಣಿಸುವರು.

ನಕ್ಷತ್ರ ಘಟಿ–ಪಳಗಳಿಗೆ ಪಳ ಮಾಡಬೇಕು.

| | |
|---|---|
| ೭೨೭ | ೧೨—೨ |
| ೪ ರಿಂದ ಗುಣಿಸಬೇಕು. | ×೬೦ |
| ೨೭ )೨೯೦೮(೧೭ | ೭೨೨ |
| ೨೭ | ೫ ಕೂಡಿಸಬೇಕು. |
| ೨೦೮ | ೭೨೭ |
| ೧೮೯ | |
| ೧೯ ಶೇಷ | |

ಚಂದ್ರನು ೫ನೆಯ ರಾಶಿ (ಸಿಂಹವಲ್ಲಿ) ಯಲ್ಲಿರುವನು. ಸಿಂಹ ಮೇಷದಿಂದ ೫ ಕೂಡಿಸಿ ೪ ರಿಂದ ಗುಣಿಸಿ ೨೭ ರಿಂದ ಭಾಗಿಸಬೇಕು.

೧೯ನೆಯ ನಕ್ಷತ್ರ ಮೂಲಾ. ಮೂಲಾದ ತ್ರಿಕೋಣ ನಕ್ಷತ್ರ ಮಘಾ. ಮಘಾದಲ್ಲಿ ಚಂದ್ರನಿರುವನು. ಇದು ಲಗ್ನ ಶುದ್ಧಿಯ ಕ್ರಮ. ಜನ್ಮಕಾಲ ಸರಿಯಾಗಿದೆ.

## ಯೋಗಕಾರಕ ಗ್ರಹಗಳು

**ಮೇಷ ಲಗ್ನಕ್ಕೆ** :— ಗುರು ಯೋಗಕಾರಕ. ಭಾಗ್ಯಾಧಿಪತಿ ಇರುವದರಿಂದ.
**ವೃಷಭ** ,, :— ಶನಿ ಯೋಗಕಾರಕ. ಭಾಗ್ಯದಶಮಾಧಿಪತಿ.
**ಮಿಥುನ** ,, :— ಬುಧ, ಶುಕ್ರರು.
**ಕರ್ಕ** ,, :— ಮಂಗಳ, ಕೆಲವರು ಗುರು ಎಂದು ಹೇಳುವರು.
**ಸಿಂಹ** ,, :— ಮಂಗಳ, ಗುರು.
**ಕನ್ಯಾ** ,, :— ಬುಧ, ಶುಕ್ರರು.
**ತುಲಾ** ,, :— ಶನಿ, ಚಂದ್ರರು.

**ವೃಶ್ಚಿಕ ಲಗ್ನಕ್ಕೆ** :— ಮಂಗಳ, ಗುರು, ಚಂದ್ರರು.
**ಧನು** ,, :— ಗುರು, ಮಂಗಳರು.
**ಮಕರ** ,, :— ಶುಕ್ರ
**ಕುಂಭ** ,, :— ಶುಕ್ರ.
**ಮೀನ** ,, :— ಚಂದ್ರ, ಗುರು, ಮಂಗಳರು.

**ಕೇಂದ್ರ ಕೋಣಾಧಿನಾಥಾನಾಂ ಯೋಗಃ ಸರ್ವ**
**ವಿಧಾಯಕಃ ।**

ಉದಾಹೃತ ಕುಂಡಲಿಯಲ್ಲಿ ಯೋಗಕಾರಕ ನಕ್ಷತ್ರದಲ್ಲಿರುವ ಗ್ರಹಗಳು ಯೋಗಕಾರಕ ಫಲವನ್ನು ಕೊಡುವವು.

**ಯೋಗಕಾರಕ ಸಂಬಂಧಾತ್ ಪಾಪಿನೋಽಪಿ**
**ಗ್ರಹಾಃ ಸ್ವತಃ ।**
**ತತ್ತದ್ಭುಕ್ತ್ಯನುಸಾರೇಣ ದಿಶೇಯುರ್ಯೋಗಜಂ ಫಲಂ ।**

| | |
|---|---|
| ರವಿ — | ಉತ್ತರಾಭಾದ್ರಪದ. |
| ಚಂದ್ರ — | ಮಘಾ |
| ಮಂಗಳ— | ಭರಣೀ. |
| ಬುಧ — | ಶತತಾರಾ. |
| ಗುರು — | ಪುಷ್ಯ. |
| ಶುಕ್ರ — | ಭರಣೀ. |
| ಶನಿ — | ಉತ್ತರಾಭಾದ್ರಪದ. |
| ರಾಹು — | ಆರಿದ್ರಾ. |
| ಕೇತು — | ಪೂರ್ವಾಷಾಢಾ. |

ವೃಷಭ ಲಗ್ನಕ್ಕೆ ಶನಿ ಯೋಗಕಾರಕ. ಅವನ ನಕ್ಷತ್ರದಲ್ಲಿ ಗುರು, ಬುಧ (ಶನಿವದ್ರಾಹುಃ) ಇದ್ದಂತೆ. ರಾಹು, ಶುಕ್ರರು, ಸೂಕ್ಷ್ಮ

ಸ್ವಕ್ಷೇತ್ರದಲ್ಲಿ, ಗುರು ಉಚ್ಚ ರಾಶಿಯಲ್ಲಿ, ಯೋಗಕಾರಕ ನಕ್ಷತ್ರದಲ್ಲಿ-ರುವನು. ಲಗ್ನಾಧಿಪತಿಯ ( ಶುಕ್ರನ ) ಅಂಕೆಯಲ್ಲಿ ಮಂಗಳನಿರುವನು. ಮಂಗಳ, ರವಿ, ಚಂದ್ರರು, ಸ್ವನವಾಂಶದಲ್ಲಿರುವರು. ಈ ಕುಂಡಲಿಯಲ್ಲಿ ಇವು ಉತ್ತಮ ಅಂಶಗಳು.

## ನವಾಂಶ ಕುಂಡಲಿ (ನಿರಯನ)



## ಸಾಯನ ಕುಂಡಲಿ




### ಶುಭ ಯೋಗಗಳು

ಮಂಗಳ : ಹರ್ಷಲ ತ್ರಿಕೋಣ. ಹರ್ಷಲ : ಚಂದ್ರ ತ್ರಿಕೋಣ. ಬುಧ : ಶುಕ್ರ ತ್ರಿರೇಕಾದಶ. ಶನಿ : ಗುರು ತ್ರಿಕೋಣ. ಮಂಗಳ : ನೇಪಚ್ಯೂನ ತ್ರಿರೇಕಾದಶ. ಹರ್ಷಲ : ಶನಿ ೭೨ ಅಂಶದ ಕೋನ. ಶುಕ್ರ : ನೇಪಚ್ಯೂನ ತ್ರಿರೇಕಾದಶ.

### ಅಶುಭ ಯೋಗಗಳು

ಶುಕ್ರ : ಗುರು ಕೇಂದ್ರ. ಬುಧ : ಚಂದ್ರ ಪ್ರತಿಯೋಗ. ನೇಪಚ್ಯೂನ : ಹರ್ಷಲ್ ಪ್ರತಿಯೋಗ

# ರವಿಯ ಅಷ್ಟಕವರ್ಗ

ಕುಂಡಲಿಯಲ್ಲಿ ಎಲ್ಲಿ ರವಿ ಇರುವನೋ ಅವನ ಸ್ಥಾನದಿಂದ ೧-೨-೪-೭-೮-೯-೧೦-೧೧ ಈ ಠಾಣಗಳಲ್ಲಿ ರವಿಯು ಒಂದೊಂದು ಬಿಂದು-ವನ್ನು ಕೊಡುವನು. ಅಲ್ಲಿ ಬಿಂದುಗಳನ್ನು ಹಾಕಬೇಕು. ಇಲ್ಲಿ ರವಿಯು ತನ್ನ ಜಾಗೆಯಿಂದ ಬಂದಾಗ ಶುಭಫಲವನ್ನು ಕೊಡುವನೆಂದು ಅರ್ಥ. ಉಳಿದ ಜಾಗೆಗಳಲ್ಲಿ ರೇಖೆಗಳನ್ನು ಹಾಕಬಹುದು. ರೇಖೆಯಲ್ಲಿದ್ದಾಗ ರವಿಯು ಅಶುಭಫಲವನ್ನು ಕೊಡುವನು.

ರವಿಯು ಅಷ್ಟಕವರ್ಗದಲ್ಲಿ ರವಿಯಿಂದ ೧-೨-೪-೭-೮-೯-೧೦-೧೧ ರಲ್ಲಿ ಬಿಂದುಗಳನ್ನಿಡಿರಿ. ಚಂದ್ರನಿಂದ ೩-೬-೧೦-೧೧ ರಲ್ಲಿ ಬಿಂದು-ಗಳನ್ನು ಇಕ್ಕಬೇಕು. ರವಿಯ ಅಷ್ಟಕವರ್ಗದಲ್ಲಿ ಮಂಗಳನಿಂದ ೧-೨-೪-೭-೮-೯-೧೦-೧೧ ಠಾಣಗಳಲ್ಲಿ ಬಿಂದುಗಳನ್ನು ಇಡಬೇಕು.

ರವಿಯ ಅಷ್ಟಕವರ್ಗದಲ್ಲಿ ಬುಧನಿಂದ ೩-೫-೬-೯-೧೦-೧೧-೧೨ ರಲ್ಲಿ ಬಿಂದುಗಳನ್ನು ಕೊಡಬೇಕು.

ಗುರುವಿನಿಂದ ೫-೬-೯-೧೧ ರಲ್ಲಿ ಬಿಂದುಗಳು ಬರುವವು.

ಶುಕ್ರನಿಂದ ೬-೭-೧೨ ರಲ್ಲಿ ಬರುವವು.

ಶನಿಯಿಂದ ೧-೨-೪-೭ ೮-೯-೧೦-೧೧ ರಲ್ಲಿ ಬರುವವು.

ಲಗ್ನದಿಂದ ೩-೪ ೬-೧೦-೧೧-೧೨ ರಲ್ಲಿ ಬಿಂದುಗಳು.

ರವಿಯ ಅಷ್ಟಕವರ್ಗದಿಂದ ತಿಳಿದುಬರುವ ಅಂಶಗಳು : ಅವನು,

ತನ್ನ ಅಷ್ಟಕವರ್ಗದಲ್ಲಿ ಹೆಚ್ಚು ಬಿಂದುಗಳ ರಾಶಿಯಲ್ಲಿ ಸಂಚರಿಸುವಾಗ ಶುಭ ಫಲವನ್ನು ಕೊಡುವನು. ೪ ಕ್ಕಿಂತ ಹೆಚ್ಚು ಬಿಂದುಗಳಿರಬೇಕು.

೮ ಬಿಂದುಗಳು ಇದ್ದಲ್ಲಿ ರಾಜಮರ್ಯಾದೆ. ರಾಜಕೀಯ ಕಾರ್ಯಾಲಯದಿಂದ ಧನಾಗಮ; ವರಿಷ್ಠರಿಂದ ಸದುಪದೇಶ. (ಸೂರ್ಯಸ್ಯಾಷ್ಟಸು ಬಿಂದುಷು ಕ್ಷಿತಿಪತೇರಾಪ್ತಾ ವಿಭೂತಿರ್ಧನಂ)

೭ ಬಿಂದುಗಳಿರುವಲ್ಲಿ ಸೂರ್ಯನ ಸಂಚಾರ ಪರರಿಂದ ಮರ್ಯಾದೆ. ಸ್ತ್ರೀಯರಿಂದ ಗೌರವ.

೬ ಬಿಂದುಗಳಿರುವಲ್ಲಿ, ಏಳಿಗೆ, ಶೌರ್ಯ, ಧನ, ಕೀರ್ತಿ.

೫ ಬಿಂದುಗಳಿರುವಲ್ಲಿ, ಸಜ್ಜನರ ಸಹವಾಸ, ವಿದ್ಯಾಗಮ, ಧನಪ್ರಾಪ್ತಿ.

೪ ಬಿಂದುಗಳು- ಸುಖ-ದುಃಖಮಿಶ್ರ.

೩ ಬಿಂದುಗಳು– ತಿರುಕುಳಿ ಜೀವನ. ಮಾನಸಿಕ ಅಶಾಂತಿ, ಶಾರೀರಿಕ ತೊಂದರೆಗಳು.

೨ ಅಸಮಾಧಾನ, ಚೋರಭೀತಿ, ಆಹಾರಸಂಪಾದನೆಯಲ್ಲಿ ತೊಂದರೆ.

೧ ಆಚಾರಿ, ಅಸ್ವಾಸ್ಥ್ಯ, ದುಃಖ.

ಉದಾಹರಣೆ :—

## ರವಿಯಿಂದ ಬಿದ್ದ ಬಿಂದುಗಳು

ಕೆಳಗಿನಂತೆ ಆಯಾ ಗ್ರಹಗಳಿರುವ ಸ್ಥಾನಗಳಿಂದ ಬಿಂದುಗಳನ್ನು ಇಡಬೇಕು. ಇಡಲಾಗಿ ರವಿಯ ಅಷ್ಟಕವರ್ಗದಲ್ಲಿ ಒಟ್ಟು ೪೮ ಬಿಂದುಗಳಾಗುವವು.

ಹೆಚ್ಚು ಬಿಂದುಗಳಿರುವ ಮಾಸದಲ್ಲಿ ರವಿ ಸಂಚರಿಸುವಾಗ ವಿವಾ–

# ರವಿಯಿಂದ ಬಿದ್ದ ಬಿಂದುಗಳು




ಹಾದಿ ಶುಭ ಕಾರ್ಯಗಳನ್ನು ಮಾಡಬೇಕು. ಕಡಿಮೆ ಬಿಂದುಗಳಿದ್ದ ಮಾಸದಲ್ಲಿ ದೂರಗಮನ, ಮಹತ್ವದ ಕಾರ್ಯಗಳನ್ನು ಮಾಡಕೂಡದು. ಶೂನ್ಯ ಬಿಂದುವಿರುವ ಮಾಸದಲ್ಲಿ ಯಾವ ಕಾರ್ಯವನ್ನೂ ಮಾಡಬಾರದು.

" ಸೂರ್ಯಾಷ್ಟವರ್ಗೇ ಯತ್ ಶೂನ್ಯಂ ಮಾಸಂ
ಸಂವತ್ಸರಂ ಪ್ರತಿ ।
ವಿವಾಹ ವ್ಯವಹಾರಾದಿ ಮಾಸೇಸ್ಮಿನ್ ವರ್ಜಯೇತ್ ಸದಾ ।

ಕಲಹೋ ಮಾಸ ದುಃಖಾನಿ ಶೂನ್ಯಮಾಸೇ ಭವಂತಿ ಚ ।
ಏವಮಾದಿ ಫಲಂ ಜ್ಞಾತ್ವಾ ಮಾಸಂ ಪ್ರತಿ ಸಮಾಚಾರೇತ್ ।

**ಉದಾಹರಣೆ :—**



ಉದಾಹೃತ ಕುಂಡಲಿಯಲ್ಲಿ ರವಿಯು ಮೂಲತಃ ೫ ಬಿಂದುಗಳಿಂದ ಕೂಡಿರುವನು.

ಇದರಿಂದ ರವಿಯ ಬಲವೂ ತಿಳಿಯುವದು. ರವಿಗೆ ೫ ಬಲವಿರುವದು.

ತುಲಾದಲ್ಲಿ ರವಿ ಸಂಚರಿಸುವಾಗ, ಅತ್ಯುತ್ತಮ ಫಲ ಕೊಡುವನು. ಸೌರಮಾಸ ತುಲಾ. ಸಪ್ಟಂಬರ ೧೩ ರಿಂದ ಅಕ್ಟೋಬರ ೧೩ ರ ವರೆಗೆ ತುಲಾ ಮಾಸ ಇರುವದು. ಸಿಂಹ, ಕುಂಭ ಮಾಸಗಳು ಕನಿಷ್ಠ. ಜಾತಕನಿಗೆ ವೃಶ್ಚಿಕ—ಧನು, ಮಕರ—ಮೇಷ ಮಾಸಗಳು ಚೆನ್ನಾಗಿರುವವು. ಮಿಥುನ ಮಾಸ ಮಧ್ಯಮ. ವೃಷಭ ಕರ್ಕ, ಮಧ್ಯಮಾಧಮ.

ಗೋಚರೀ ಗ್ರಹಗಳಿಂದ ಫಲಗಳನ್ನು ನೋಡುವಾಗ ಈ ಪದ್ಧತಿ ಪ್ರಯೋಜನಕಾರಿಯಾಗಿದೆ. ದಶಾಪದ್ಧತಿಯಿಂದ ಫಲಗಳನ್ನು ನೋಡುವಾಗ

ಇದರ ಸಹಾಯವು ಅನಿವಾರ್ಯವಾಗಿರುವದು.

ಯಾವ ದಿಕ್ಕಿನಲ್ಲಿ ಹೆಚ್ಚು ಬಿಂದುಗಳು ಬಿದ್ದಿರುವವೋ, ಆ ದಿಕ್ಕಿನಲ್ಲಿ ಶಿವನನ್ನು ಭಜಿಸಬೇಕು. ಭೂಪತಿಯನ್ನು ಏಸಿರಿಗಾಗಿ ಸೇವಿಸಬೇಕು. ಆ ದಿಕ್ಕಿನಲ್ಲಿ ದೇವಾರ್ಚನೆ ಹಿತಕರ.

ಮೇಷ-ಸಿಂಹ-ಧನು : ಪೂರ್ವ ದಿಕ್ಕು
ವೃಷಭ-ಕನ್ಯಾ-ಮಕರ : ದಕ್ಷಿಣ ದಿಕ್ಕು.
ಮಿಥುನ-ತುಲಾ-ಕುಂಭ : ಪಶ್ಚಿಮ ದಿಕ್ಕು.
ಕರ್ಕ-ವೃಶ್ಚಿಕ-ಮೀನ : ಉತ್ತರ ದಿಕ್ಕು.

**ಈ ಕುಂಡಲಿಯಲ್ಲಿ :** ವೃಷಭ-ಕನ್ಯಾ-ಮಕರ :-೩+೩+೫=೧೧.
ಮಿಥುನ-ತುಲಾ-ಕುಂಭ :-೪+೭+೨=೧೩.
ಕರ್ಕ-ವೃಶ್ಚಿಕ-ಮೀನ :-೩+೫+೫=೧೩.
ಸಿಂಹ-ಧನು-ಮೇಷ :-೧+೫+೫=೧೧.

ಪಶ್ಚಿಮ ಉತ್ತರ ದಿಕ್ಕಿನಲ್ಲಿ ಹೆಚ್ಚು ಬಿಂದುಗಳಿರುವವು. ಸೂರ್ಯನಿರುವ ಭಾವದಿಂದ ೪ ಭಾವಗಳ ವರೆಗೆ ಬಿಂದುಗಳನ್ನು ಕೂಡಿಸಬೇಕು. ಸೂರ್ಯನಿಂದ ೫-೬-೭-೮; ಸೂರ್ಯನಿಂದ ೯-೧೦-೧೧-೧೨ ಭಾವಗಳಲ್ಲಿರುವ ಬಿಂದುಗಳನ್ನು ಬೇರೆ ಬೇರೆ ಕೂಡಿಸಿ ೩ ಭಾಗಗಳನ್ನು ಮಾಡಬೇಕು.

೫+೫+೩+೪=೧೭ ಪೂರ್ವಾಹ್ಣ.
೩+೧+೩+೭=೧೪ ಮಧ್ಯಾಹ್ನ.
೫+೫+೫+೨=೧೭ ಸಾಯಾಹ್ನ.

ದಿವಸವನ್ನು ಮೂರು ಭಾಗಗಳನ್ನು ಮಾಡಿ ಹೆಚ್ಚು ಬಿಂದುಗಳಿರುವ ದಿನದ ಭಾಗವು ಹಿತಕರ.

ಜಾತಕನಿಗೆ ಮುಂಜಾವಿನ ೪ ತಾಸು ಸಂಜೆಯ ಮುಂದಿನ ನಾಲ್ಕು ತಾಸು ಹಿತಕರ. ೧೭ ಬಿಂದುಗಳು ಇರುವವು.

ಗ್ರಹದ ಅಷ್ಟಕವರ್ಗದಲ್ಲಿ ಬಿಂದುಗಳನ್ನು ತುಂಬಿದ ಬಳಿಕ ತ್ರಿಕೋಣ ಶೋಧನ, ಏಕಾಧಿಪತ್ಯ ಶೋಧನ-ಎರಡು ವಿಧಿಗಳನ್ನು ಮಾಡಬೇಕು.

## — ತ್ರಿಕೋಣ ಶೋಧನ —

**ತ್ರಿಕೋಣಂ ತು ಕಥಂ ಪ್ರೋಕ್ತಂ ಮೇಷ ಸಿಂಹ**
**ಹಯಕ್ರಮಾತ್ ।**
**ವೃಷಕನ್ಯಾ ಮೃಗಾಖ್ಯೇಷು ಯುಗ್ಮತೌಲಿ ಘಟೇಷು ಚ ।**

**ಕರ್ಕ ವೃಶ್ಚಿಕ ಮೀನಾಸ್ತೇ ತ್ರಿಕೋಣಾಸ್ಸ್ಯುಃ ಪರಸ್ಪರಂ ।**
**ತ್ರಿಕೋಣೇಷು ಯನ್ನ್ಯೂನಂ ತತ್ತುಲ್ಯಂ ತ್ರಿಷು**
**ಶೋಧಯೇತ್ ।**

**ಏಕಸ್ಮಿನ್ ಭವನೇ ಶೂನ್ಯೇ ತತ್ ತ್ರಿಕೋಣಂ ನ**
**ಶೋಧಯೇತ್ ।**
**ಸಮತ್ವೇ ಸರ್ವಗೇಹೇಷು ಸರ್ವಂ ಸಂಶೋಧಯೇದ್ಬುಧಃ ।**

ಮೇಷ ಸಿಂಹ ಧನೂರಾಶಿಗಳು ಪರಸ್ಪರ ತ್ರಿಕೋಣಗಳು.

ವೃಷಭ ಕನ್ಯಾ ಮಕರಗಳು " "
ಮಿಥುನ ಕುಂಭ ತುಲಾಗಳು " "
ಕರ್ಕ ವೃಶ್ಚಿಕ ಮೀನಗಳು " "

ತ್ರಿಕೋಣ ರಾಶಿಗಳಲ್ಲಿ ಒಂದರಲ್ಲಿ ಕಡಿಮೆ ಬಿಂದುಗಳಿದ್ದರೆ, ಆ ಬಿಂದುಗಳನ್ನು ಮೂರು ರಾಶಿಗಳಿಂದ ಅಳಿಸಬೇಕು. ಒಂದು ರಾಶಿಯಲ್ಲಿ ಬಿಂದುಗಳು ಇಲ್ಲದಿದ್ದರೆ ಉಳಿದ ಎರಡು ರಾಶಿಗಳಿಂದ ಬಿಂದುಗಳನ್ನು ವಜಾ ಮಾಡತಕ್ಕದ್ದಲ್ಲ.

೩ ರಾಶಿಗಳಲ್ಲಿ ಸಮಾನ ಬಿಂದುಗಳಿದ್ದರೆ, ೩ ರಾಶಿಗಳಿಂದ ಅವು-ಗಳನ್ನು ವಜಾ ಮಾಡಬೇಕು.

## ಲಗ್ನ ಕುಂಡಲಿ




## ತ್ರಿಕೋಣ ಶೋಧನ

ಉದಾಹೃತ ಕುಂಡಲಿಯಲ್ಲಿ ರವಿಯ ಅಷ್ಟಕವರ್ಗದಲ್ಲಿ ಬಿದ್ದ ಬಿಂದುಗಳ ಕುಂಡಲಿಯು ೨೦ನೆಯ ಪುಟದಲ್ಲಿ ಬಂದಿದೆ, ನೋಡಿಕೊಳ್ಳಬೇಕು.

ವೃಷಭ-ಕನ್ಯಾ-ಮಕರಗಳು ತ್ರಿಕೋಣ ರಾಶಿಗಳು.— ಇಲ್ಲಿ ಕ್ರಮವಾಗಿ ೩-೩-೫ ಬಿಂದುಗಳಿರುವವು. ಕಡಿಮೆ ಅಂಕ ೩ ಇದನ್ನು ಮೂರೂ ರಾಶಿಗಳಿಂದ ವಜಾ ಮಾಡಿದಲ್ಲಿ ಮಕರದಲ್ಲಿ ಮಾತ್ರ ೨ ಬಿಂದುಗಳು ಉಳಿಯುವವು.

ತದನಂತರ ಮಿಥುನ ತ್ರಿಕೋಣದಲ್ಲಿ ಕ್ರಮವಾಗಿ ೪-೬-೨ ಬಿಂದುಗಳಿರುವವು. ಇದರಲ್ಲಿ ೨ ನ್ಯೂನಾಂಕ ಇದನ್ನು ವಜಾ ಮಾಡಲಾಗಿ

ತುಲಾದಲ್ಲಿ ೫, ಮಿಥುನದಲ್ಲಿ ೨ ಬಿಂದುಗಳು ಉಳಿಯುವವು.

ಕರ್ಕ ತ್ರಿಕೋಣದಲ್ಲಿ ೩-೫-೫ ಇರುವವು. ಇವುಗಳಲ್ಲಿ ೩ ವಜಾ ಮಾಡಲಾಗಿ, ವೃಶ್ಚಿಕದಲ್ಲಿ ೨, ಮೀನದಲ್ಲಿ ೨ ಬಿಂದುಗಳು ಉಳಿಯುವವು.

ಸಿಂಹ ತ್ರಿಕೋಣದಲ್ಲಿ ೧-೫-೫ ಬಿಂದುಗಳಿರುವವು. ಇವುಗಳಲ್ಲಿ ನ್ಯೂನಾಂಕ ೧ ಇದನ್ನು ಕಳೆಯಲಾಗಿ, ಧನುವಲ್ಲಿ ೪, ಮೇಷದಲ್ಲಿ ೪ ಉಳಿಯುವವು.

ತ್ರಿಕೋಣ ಶೋಧನದ ನಂತರ ಉಳಿಯುವ ಬಿಂದುಗಳು:—

**ಉದಾಹರಣೆ :—**




ತದನಂತರ ಏಕಾಧಿಪತ್ಯ ಶೋಧನ.

ಏವಂ ತ್ರಿಕೋಣಂ ಸಂಶೋಧ್ಯ ಪಶ್ಚಾದೇಕಾಧಿಪತ್ಯತಾ।
ಕ್ಷೇತ್ರದ್ವಯಂ ಫಲಾನಿ ಸ್ಯುಃ ತದಾ ಸಂಶೋ-
ಧಯೇದ್ಬುಧಃ ।

ಕ್ಷೀಣೇನ ಸಹ ಚಾನ್ಯಸ್ಮಿನ್ ಶೋಧಯೇತ್
ಗ್ರಹವರ್ಜಿತೇ ।
ಗ್ರಹಯುಕ್ತೇ ಫಲೇಹೀನೇ ಗ್ರಹಾಭಾವೇ ಫಲಾಧಿಕೇ ।

ಅನೇನ ಸಹಚಾನ್ಯಸ್ಮಿನ್ ಶೋಧಯೇತ್ ಗ್ರಹವರ್ಜಿತೇ ।
ಫಲಾಧಿಕೇ ಗ್ರಹೈರ್ಯುಕ್ತೇ ಚಾನ್ಯಸ್ಮಿನ್ ಸರ್ವ-
ಮುತ್ಸೃಜೇತ್ ।

ಉಭಯೋರ್ಗ್ರಹ ಸಂಯುಕ್ತೇ ನ ಸಂಶೋಧ್ಯಃ
ಕದಾಚನ ।
ಉಭಯೋರ್ಗ್ರಹ ಹೀನಾಭ್ಯಾಂ ಸಮತ್ವೇ ಸಕಲಂ
ತ್ಯಜೇತ್ ।

ಸಗ್ರಹಾಗ್ರಹ ತುಲ್ಯತ್ವೇ ಸರ್ವಂ ಸಂಶೋಧ್ಯ-
ಮಗ ಹಾತ್ ।
ಕುಲೀರ ಸಿಂಹಯೋಃ ರಾಶ್ಯೋಃ ಪೃಥಕ್ ಕ್ಷೇತ್ರಂ
ಪೃಥಕ್ ಫಲಂ ।

ಮೇಷ-ವೃಶ್ಚಿಕ ರಾಶಿಗಳಿಗೆ ಮಂಗಳನ ಏಕಾಧಿಪತ್ಯ. ಮಿಥುನ ಕನ್ಯಾರಾಶಿಗಳಿಗೆ ಬುಧನ ಏಕಾಧಿಪತ್ಯ. ವೃಷಭ ತುಲಾಗಳಿಗೆ ಶುಕ್ರನ ಏಕಾಧಿಪತ್ಯ. ಧನು – ಮೀನ ರಾಶಿಗಳಿಗೆ ಗುರು ಏಕಾಧಿಪತಿ. ಮಕರ ಕುಂಭರಾಶಿಗಳಿಗೆ ಶನಿಯು ಏಕಾಧಿಪತ್ಯ. ರವಿ ಚಂದ್ರರಿಗೆ ಎರಡುರಾಶಿಗಳ ಆಧಿಪತ್ಯವಿಲ್ಲ. ಕರ್ಕಕ್ಕೆ ಚಂದ್ರನು ಅಧಿಪತಿ. ಸಿಂಹಕ್ಕೆ ರವಿ – ಅಧಿಪತಿ.

, ಜಾಣನು— ಎರಡು ರಾಶಿಗಳಲ್ಲಿಯೂ ( ಏಕಾಧಿಪತ್ಯದ ) ಬಿಂದು-ಗಳಿದ್ದರೆ— ವಜಾಬಾಕಿ ಕ್ರಮವನ್ನು ಕೈಕೊಳ್ಳಬೇಕು.

ಎರಡೂ ರಾಶಿಗಳು ಗ್ರಹವಿಲ್ಲದೆ ಇದ್ದರೆ, ಬಿಂದುಗಳು ನ್ಯೂನಾಧಿಕ-ವಿದ್ದರೆ ಎರಡೂ ರಾಶಿಗಳಿಂದ ಸಣ್ಣ ಸಂಖ್ಯೆಯನ್ನು ವಜಾ ಮಾಡಬೇಕು.

ಒಂದು ರಾಶಿಯಲ್ಲಿ ಗ್ರಹವಿದ್ದು ಬಿಂದುಗಳು ಕಡಿಮೆಯಿದ್ದರೆ (ಮತ್ತೊಂದು ರಾಶಿಗಿಂತ) ಸಣ್ಣ ಸಂಖ್ಯೆಯನ್ನು ಮತ್ತೊಂದು ರಾಶಿಯ-ಲ್ಲಿಯ ಬಿಂದುಗಳಲ್ಲಿ ವಜಾ ಮಾಡಬೇಕು.

ಗ್ರಹವಿದ್ದ ರಾಶಿಯಲ್ಲಿ ಮತ್ತೊಂದು ರಾಶಿಗಿಂತ ಹೆಚ್ಚು ಬಿಂದುಗಳಿ-ದ್ದರೆ, ಗ್ರಹವಿಲ್ಲದ ರಾಶಿಯಲ್ಲಿಯ ಎಲ್ಲ ಬಿಂದುಗಳನ್ನು ಅಳಿಸಿಬಿಡ-ಬೇಕು.

ಏಕಾಧಿಪತ್ಯದ ಎರಡೂ ರಾಶಿಗಳಲ್ಲಿ ಗ್ರಹಗಳಿದ್ದರೆ ವಜಾಬಾಕಿ ಮಾಡತಕ್ಕದ್ದಲ್ಲ.

ಎರಡೂ ರಾಶಿಗಳಲ್ಲಿ ಗ್ರಹಗಳು ಇಲ್ಲದಿದ್ದರೆ, ಸಮಾನ ಬಿಂದುಗಳಿದ್ದರೆ ಎರಡೂ ರಾಶಿಗಳಿಂದ ಆ ಬಿಂದುಗಳನ್ನು ಅಳಿಸಿಬಿಡಬೇಕು.

ಎರಡೂ ರಾಶಿಗಳಲ್ಲಿ ಸಮಾನ ಬಿಂದುಗಳಿದ್ದು ಒಂದು ರಾಶಿಯಲ್ಲಿ ಮಾತ್ರ ಗ್ರಹವಿದ್ದರೆ ಮತ್ತೊಂದು ರಾಶಿಯಿಂದ ಬಿಂದುಗಳನ್ನು ಅಳಿಸ ಬೇಕು.

ಕರ್ಕ, ಸಿಂಹರಾಶಿಗಳಲ್ಲಿ ಇದ್ದಷ್ಟೇ ಬಿಂದುಗಳನ್ನು ಇಡಬೇಕು. ಇಲ್ಲಿ ವಜಾಬಾಕಿಯ ಕ್ರಮವಿಲ್ಲ.

ಈ ನಿಯಮಗಳನ್ನು ಸಾವಧಾನದಿಂದ ಅನುಸರಿಸಿರಿ.

(ಏಕಾಧಿಪತ್ಯ ಶೋಧನಾನಂತರ ರವಿಯ ಅಷ್ಟಕವರ್ಗದಲ್ಲಿ ಉಳಿಯುವ ಬಿಂದುಗಳು.)

**ಉದಾಹರಣೆ :—**




ಇವು ಒಟ್ಟು ೧೭ ಇರುವವು. ಇವಕ್ಕೆ ಶೋಧ್ಯಾವಶಿಷ್ಟ ಬಿಂದು-ಗಳೆಂದು ಕರೆಯುವರು.

ತದನಂತರ ರಾಶಿ ಗುಣಾಕಾರ, ಗ್ರಹ ಗುಣಾಕಾರವನ್ನು ಮಾಡ-ಬೇಕು.

## ರಾಶಿ ಗುಣಾಕಾರ

| ಮೇಷ | ವೃಷಭ | ಮಿಥುನ | ಕರ್ಕ |
|---|---|---|---|
| ೭ | ೧೦ | ೮ | ೪ |

| ಸಿಂಹ | ಕನ್ಯಾ | ತುಲಾ | ವೃಶ್ಚಿಕ |
|---|---|---|---|
| ೧೦ | ೫ | ೭ | ೮ |

| ಧನು | ಮಕರ | ಕುಂಭ | ಮೀನ |
|---|---|---|---|
| ೯ | ೫ | ೧೧ | ೧೨ |

ತ್ರಿಕೋಣ ಏಕಾಧಿಪತ್ಯ ಶೋಧನದ ನಂತರ ವೃಷಭ-ಸಿಂಹಗಳಲ್ಲಿರುವ ಅಂಕಿಗಳನ್ನು ೧೦ ರಿಂದ ಗುಣಿಸಬೇಕು. ಮಿಥುನ - ವೃಶ್ಚಿಕಗಳಲ್ಲಿರುವ ಅಂಕಿಗಳನ್ನು ೮ ರಿಂದ ಗುಣಿಸಬೇಕು. ತುಲಾ-ಮೇಷಗಳಲ್ಲಿರುವ ಅಂಕೆಗೆ ೭ ರಿಂದ ಗುಣಿಸಬೇಕು. ಕನ್ಯಾ-ಮಕರಗಳಲ್ಲಿರುವ ಅಂಕೆಗೆ ೫ ರಿಂದ ಗುಣಿಸಬೇಕು. ಕರ್ಕಕ್ಕೆ ೪ ರಿಂದ, ಧನುವಿಗೆ ೯ ರಿಂದ, ಕುಂಭಕ್ಕೆ ೧೧ ರಿಂದ, ಮೀನಕ್ಕೆ ೧೨ ರಿಂದ ಗುಣಿಸಬೇಕು. ( ಅಲ್ಲಿರುವ ಬಿಂದು ಸಂಖ್ಯೆಗೆ ) ಕರ್ಕ, ಧನು, ಕುಂಭ, ಮೀನಗಳು ತದ್ರಾಶ್ಯಂಕ ಸೂಚಕ ಅಂಕಗಳನ್ನು ಹೊಂದಿರುವವು.

**ರಾಶಿ ಗುಣಾಕಾರ** :

ಮಿಥುನ ೨×೮=೧೬
ತುಲಾ ೫×೭=೩೫
ಧನು ೨×೯=೧೮
ಮಕರ ೨×೫=೧೦
ಮೀನ ೨×೧೨=೨೪
ಮೇಷ ೪×೭=೨೮

———

೧೩೧ ರಾಶಿಪಿಂಡ

## ಗ್ರಹ ಗುಣಾಕಾರ

| ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| ೫ | ೫ | ೮ | ೫ | ೧೦ | ೭ | ೫ |

## ಗ್ರಹ ಗುಣಾಕಾರ

ಮಂಗಳ ೪×೮=೩೨
ಶುಕ್ರ ೪×೭=೨೮
ರವಿ ೨×೫=೧೦
ಶನಿ ೨×೫=೧೦
——
೮೦ ಗ್ರಹಪಿಂಡ

ರಾಶಿಪಿಂಡ ಹಾಗೂ ಗ್ರಹಪಿಂಡಗಳನ್ನು ಕೂಡಿಸಬೇಕು. ಇದರಿಂದ ಶೋಧ್ಯಪಿಂಡ ಬರುವದು.

ಉದಾ :—

೧೩೧
೮೦
——
೨೧೧ ಇದು ಶೋಧ್ಯಪಿಂಡ.

ಇಷ್ಟೆಲ್ಲ ವಿಧಿವಿಧಾನದ ನಂತರ ಫಲಿತ ವಿಚಾರ. ಇದು ಕರ್ಮ-ಕಾಂಡದ ವಿಧಿಯಂತೆ ಇರುವದು. ಅವಧಾನ ತಪ್ಪಿದರೆ ಫಲವು ಶೂನ್ಯ ಅಥವಾ ತಪ್ಪು ಬರುವದು.

ಸೂರ್ಯಾಷ್ಟಕವರ್ಗದಿಂದ ಜಾತನ ಮರಣಮಾಸವನ್ನು ಹೇಳಬಹುದು.

**ಸಂಶೋಧ್ಯಪಿಂಡಂ ಸೂರ್ಯಸ್ಯ ರಂಧ್ರಮಾನೇನ ವರ್ಧಯೇತ್ ।**
**ದ್ವಾದಶೇನ ಹೃತಾಚ್ಛೇಷ ಮೇಷರಾಶಿಂ ಗತೇ ದಿವಾಕರೇ**
**ತತ್ ತ್ರಿಕೋಣಗತೇ ವಾಪಿ ಮರಣಂ ತತ್ರ ನಿರ್ದಿಶೇತ್ ।**

ಶೋಧ್ಯಪಿಂಡಕ್ಕೆ ಶೋಧನಕ್ಕಿಂತ ಪೂರ್ವದಲ್ಲಿ ಸೂರ್ಯನಿಂದ ೮ರಲ್ಲಿರುವ ಬಿಂದುಗಳಿಂದ ಗುಣಿಸಬೇಕು.

ಉದಾ :— ೨೧೧
× ೭
———
೧೪೭೭

ಅದಕ್ಕೆ ೧೨ ರಿಂದ ಭಾಗಿಸಬೇಕು.

೧೨) ೧೪೭೭ (೧೨೩
೧೨
———
೨೭
೨೪
———
೩೭
೩೬
——
೧ ಮೇಷಮಾಸ ಬರುವದು.

ಮೇಷದ ತ್ರಿಕೋಣ ರಾಶಿಗಳು ಸಿಂಹ-ಧನುಗಳು. ಮೇಷ, ಧನುದಲ್ಲಿ ೫ ಬಿಂದುಗಳಿರುವವು. ಸಿಂಹದಲ್ಲಿ ಒಂದೇ ಬಿಂದುವಿರುವದು. ಕಾರಣ ಸಿಂಹಮಾಸ ಮೃತ್ಯುಸಂಭವ ಮಾಸ.

ಸಿಂಹಮಾಸವು ಆಗಸ್ಟ ೧೭ರ ರಿಂದ ಸಪ್ಟಂಬರ ೧೬ ವರೆಗೆ ಇರುವದು. ಮಾರಕ ದಶಾಂತರ್ದಶೆಗಳನ್ನು ನಿರ್ಣಯಿಸಿದ ಬಳಿಕ ಇದರ ಪ್ರಯೋಜನ ಪಡೆಯಬಹುದು.

ಯಾವ ಗ್ರಹದ ಅಷ್ಟಕವರ್ಗದಲ್ಲಿಯೇ ಆಗಲಿ ೪ ಬಿಂದುಗಳು ಬಿದ್ದಿದ್ದರೆ ಅಲ್ಲಿ ಆ ಗ್ರಹ ಸಂಚಾರದಲ್ಲಿ ಸಮತೆ. ೫ ಬಿಂದುಗಳಿಗಿಂತ ೬-೭-೮ ಬಿಂದುಗಳು ಹಿತಕರವಾಗುವವು.

**ಚತುರ್ಭಿಃ ಸಮತಾಮಾಹ ।**
**ಪಂಚಭಿಃ ಪರಮಾನಂದಂ ಷಡ್ಭಿರರ್ಥಾಗಮೋ ಭವೇತ್ ।**
**ಸಪ್ತಭಿಃ ಸಕಲಂ ಸೌಖ್ಯಂ ಅಷ್ಟಭಿಃ ಪೂರ್ಣಕಾರ್ಯಕೃತ್ ॥**

ಜನ್ಮಕಾಲದಲ್ಲಿ, ಕುಂಡಲಿಯಲ್ಲಿ ರವಿಯಿಂದ ೪ ರಲ್ಲಿ ರಾಹು, ಮಂಗಳ-ಶನಿ ಯಾರಾದರೂ ದುರ್ಬಲರಿದ್ದಲ್ಲಿ ತಂದೆಗೆ ಮಾರಕರಾಗುವರು.

ಉದಾಹೃತ ಕುಂಡಲಿಯಲ್ಲಿ ಸೂರ್ಯನಿಂದ ೪ ರಲ್ಲಿ ರಾಹು ಇರುವನು. ಕಾರಣ ಜಾತನ ೧೭ ನೆಯ ವರ್ಷಕ್ಕೆ ತಂದೆಯ ಮರಣವಾಗಿರುವದು.

ರವಿಯ ಅಷ್ಟಕವರ್ಗದಿಂದ ಪಿತೃ-ಮರಣಕಾಲವು ತಿಳಿಯುವದು. ರವಿಯಿಂದ ೯ ರಲ್ಲಿ ಬಿದ್ದ ಬಿಂದುಸಂಖ್ಯೆಯಿಂದ ರವಿಯ ಶೋಧ್ಯಪಿಂಡಕ್ಕೆ ಗುಣಿಸಿ ೨೭ ರಿಂದ ಭಾಗಿಸಬೇಕು. ಉಳಿದ ಸಂಖ್ಯೆಯನ್ನು ತಕ್ಕೊಂಡು ಅಷ್ಟನೇ ನಕ್ಷತ್ರದಲ್ಲಿ ಶನಿಯ ಸಂಚಾರವಿದ್ದಾಗ ತಾತನ ಮರಣ ಸಂಭವವಿರುವದು. ಅಥವಾ ಜನ್ಮಕುಂಡಲಿಯಲ್ಲಿ ಶನಿಯು ಯಾವ ನಕ್ಷತ್ರದಲ್ಲಿರುವನೋ ಆ ನಕ್ಷತ್ರದಿಂದ ಅಷ್ಟನೇ ನಕ್ಷತ್ರದಲ್ಲಿ ಶನಿಯು ಸಂಚಾರ-

ವಿದ್ದಾಗ ತಾತನ ಮೃತ್ಯುಸಂಭವವಿರುವದು. ಇಲ್ಲಿ ಶನಿಗತ ನಕ್ಷತ್ರದಿಂದ ೧೬ನೆಯ ನಕ್ಷತ್ರ ಸ್ವಾತಿ ಇರುವದು.

ತ್ರಿಕೋಣ – ಶೋಧನ, ಏಕಾಧಿಪತ್ಯ ಶೋಧನ ಮಾಡಿದ ನಂತರ ಉಳಿಯುವ ಬಿಂದು ಸಂಖ್ಯೆಯನ್ನು ಎರಡೂ ಶೋಧನದ ನಂತರ ರವಿಯಿಂದ ನವಮದಲ್ಲಿ ಇರುವ ಬಿಂದು ಸಂಖ್ಯೆಯಿಂದ ಗುಣಿಸಿ ೨೭ ರಿಂದ ಭಾಗಿಸಬೇಕು.

ರವಿಯಿಂದ ನವಮದಲ್ಲಿ ಶೂನ್ಯ ಬಿಂದು ಇದ್ದರೆ ಗುಣಾಕಾರದ ಆವಶ್ಯಕತೆ ಇಲ್ಲ. ಉದಾಹೃತ ಕುಂಡಲಿಯಲ್ಲಿ ಎರಡೂ ಶೋಧನದ ನಂತರ ಉಳಿಯುವ ಬಿಂದುಗಳು (ಶೋಧ್ಯಾವಶಿಷ್ಟ) ೧೭. ರವಿಯಿಂದ ನವಮದಲ್ಲಿ (ಶೋಧನದ ನಂತರ) ಬಿಂದುಗಳು ಇಲ್ಲದಿರುವದರಿಂದ ಗುಣಾಕಾರ ಅವಶ್ಯವಿಲ್ಲ. ೧೭ ಸಂಖ್ಯೆಯನ್ನೇ ತಕ್ಕೊಳ್ಳಬೇಕು. ಜನ್ಮ ಕುಂಡಲಿಯಲ್ಲಿ ಶನಿ ಉತ್ತರಾಭಾದ್ರಪದದಲ್ಲಿರುವನು. ಉತ್ತರಾಭಾದ್ರದಿಂದ ೧೬ನೆಯ ನಕ್ಷತ್ರ ಸ್ವಾತಿ. ಸ್ವಾತಿಯಲ್ಲಿ ಶನಿಯ ಸಂಚಾರವಿದ್ದಾಗ ೧೯೩೫ ಜುಲೈದಲ್ಲಿ ತಂದೆಗೆ ಶನಿ ಮಾರಕನಾಗಿದ್ದನು.

## ಆಧಾರಪದ್ಯ

ಶಿಷ್ಟಾನೀಹ ಫಲಾನಿ ಯಾನಿ ಭವನಯೋಃ ಚಕ್ರೇ ಪರಂ ಶೋಧನಾತ್ ।
ಸಂಯೋಜ್ಯಾಖಿಲಮೇತದರ್ಕನವಮೇ ಶಿಷ್ಟೈಃ ಫಲೈಸ್ತಾಡಿತಂ ।
ಶಿಷ್ಟಂ ಚೇನ್ನಭನೋನಕೇವಲನಿಂದಂ ಹೃತ್ವಾ ಸುರೈಃ ಶೇಷಭೇ ।
ದಸ್ರಾದ್ಯೇ ಚರತಿ ಪ್ರಭಾಕರಸುತೇ ವಾ ತಾತಮೃತ್ಯುರ್ಭವೇತ್ ।

ತ್ರಿಕೋಣ ಶೋಧನ




ಏಕಾಧಿಪತ್ಯ ಶೋಧನ.




ಶೋಧ್ಯಾವಶಿಷ್ಟ ೦೩.

ಈ ಶೋಧ್ಯಾವಶಿಷ್ಟವನ್ನು ಸೂರ್ಯನಿಂದ ನವಮಸ್ಥಾನದಲ್ಲಿದ್ದ ಬಿಂದುಗಳಿಂದ ಗುಣಿಸಬೇಕು. ಉದಾಹೃತ ಕುಂಡಲಿಯಲ್ಲಿ ನವಮದಲ್ಲಿ ಬಿಂದುಗಳಿಲ್ಲ, ಕಾರಣ ೧೭— ಇಷ್ಟೇ ಉಳಿಯುವದು. ಇದನ್ನು ೨೭ ನಕ್ಷತ್ರ-ಸಂಖ್ಯೆಯಿಂದ ಭಾಗಿಸಲಾಗಿ ೧೭ ಉಳಿಯುವದು. ೧೭ನೆಯ ನಕ್ಷತ್ರ **ಅನುರಾಧಾ** ಇರುವದು. ಇದು ಶನಿಯ ನಕ್ಷತ್ರ. ಶನಿವದ್ರಾಹುಃ, ಎಂಬ ಸೂತ್ರದಂತೆ ಶನಿಯ ಫಲವನ್ನು ರಾಹು ಕೊಡುವನು. ರಾಹುವಿನ ನಕ್ಷತ್ರದಲ್ಲಿ ಅಂದರೆ ಸ್ವಾತಿಯಲ್ಲಿ ಶನಿ ಇದ್ದಾಗ ಪಿತೃಮಾರಕವಾಗಿರುವದು. ೧೯೨೫ ಜುಲೈಯಲ್ಲಿ ಸ್ವಾತಿಯಲ್ಲಿ ಶನಿಯಿದ್ದನು.

**ದಸ್ರಾದ್ಯೇ ಚರತಿ ಪ್ರಭಾಕರಸುತೇ ತಾತಸ್ಯ ಮೃತ್ಯು-**
**ರ್ಭವೇತ್ (ಅಷ್ಟಕವರ್ಗ)**

ಇನ್ನು ರಾಶಿ-ಗುಣಾಕಾರ, ಗ್ರಹ-ಗುಣಾಕಾರ-ಇವುಗಳನ್ನು ಕೂಡಿಸಬೇಕು. ಅಂದರೆ ಶೋಧ್ಯಪಿಂಡ ಬರುವದು.

ಉದಾ :— ೧೩೧
೮೦
———
೨೧೧ ಶೋಧ್ಯಪಿಂಡ.

ಶೋಧ್ಯಪಿಂಡಕ್ಕೆ ರವಿಯಿಂದ ೯ ರಲ್ಲಿ ನಜಾಬಾಕಿಗಿಂತ ಮೊದಲು ಬಿಂದುಗಳಿಂದ ಗುಣಿಸಬೇಕು.

ಉದಾ:— ೨೧೧ಕ್ಕೆ ರವಿಯ ೯ ರಲ್ಲಿ ನಜಾಬಾಕಿಗಿಂತ ಮೊದಲು ೫ ಬಿಂದುಗಳಿರುವವು.

೨೧೧×೫=೧೦೫೫. ಇದಕ್ಕೆ ೨೭ ರಿಂದ ಭಾಗಿಸಬೇಕು.

೨೭ ) ೧೦೫೫ ( ೩೯  ೨ ಶೇಷ ಉಳಿಯಿತು. ಅಶ್ವಿನಿಯಿಂದ ಎಣಿಸಲಾಗಿ ೨ನೆಯ ನಕ್ಷತ್ರ ಭರಣಿ. ಶುಕ್ರನ ನಕ್ಷತ್ರ.
೮೧
—
೨೪೫
೨೪೩
———
೨

ಇದರ ತ್ರಿಕೋಣ ನಕ್ಷತ್ರ **ಪೂರ್ವಾಷಾಢಾ-ಪೂರ್ವಾ.** ಪೂರ್ವಾಷಾಢಾದಲ್ಲಿ ಗುರು ಇದ್ದಾಗ ತಾತ ಮಾರಕವಾಗಿರುವನು. ೧೯೨೫ ಜುಲೈವಲ್ಲಿ ಪೂರ್ವಾಷಾಢಾದಲ್ಲಿ (ಧನುರಾಶಿ) ಗುರು ಇದ್ದನು.

ರವಿಯಿಂದ ೭ ರಲ್ಲಿ ೩ ಬಿಂದುಗಳಿರುವವು. ಆದರಿಂದ ೨೧೧×೩=೬೩೩ ಇದಕ್ಕೆ ÷೭ ರಿಂದ ಭಾಗಿಸಲಾಗಿ ೧೨ ಉಳಿಯುವದು. ಮೀನ, ಅದರ ತ್ರಿಕೋಣ ಮಾಸಗಳು ಕರ್ಕ, ವೃಶ್ಚಿಕ. ಕರ್ಕಮಾಸದಲ್ಲಿ ಅಂದರೆ ಜುಲೈ ೧೩ ರಿಂದ ಅಗಸ್ಟ ೧೩ ರ ವರೆಗೆ ಪಿತೃಮರಣವಾಗಿದೆ.

ಶೋಧ್ಯ - ಪಿಂಡವನ್ನು ೮ ರಲ್ಲಿ ಬಿದ್ದ ಬಿಂದುಗಳಿಂದ ಗುಣಿಸಬೇಕು. ೭ ಬಿಂದುಗಳಿರುವವು.

೨೧೧×೭=೧೪೭೭

೧೨ ) ೧೪೭೭ ( ೧೨೩

೧೨

——

೨೭

೨೪

——

೩೭

೩೬

——

೧ ೧ ಉಳಿಯುವದು. ಮೇಷ ಮಾಸ. ಇದರ ತ್ರಿಕೋಣ ರಾಶಿಗಳು :— ಸಿಂಹ, ಧನು- ಸಿಂಹದಲ್ಲಿ ತೀರ ಕಡಿಮೆ ಬಿಂದು ೧ ಬಿದ್ದಿರುವದು. ಕಾರಣ ಸಿಂಹಮಾಸ ಜಾತನಿಗೆ **ಮಾರಕ.** (ಅಗಸ್ಟ ೧೩ ರಿಂದ ಸಪ್ಟಂಬರ ೧೩ ರ ವರೆಗೆ)

**ಪರಾಶರ :—**

**ಸಂಶೋಧ್ಯ ಪಿಂಡಂ ಸೂರ್ಯಸ್ಯ ರಂಧ್ರಮಾನೇನ ವರ್ಧಯೇತ್ ।**
**ದ್ವಾದಶಾದಿಹೃತಾತ್ ಶೇಷಾಂ ಮೇಷಾದಿ ಗಣಯೇತ್ ಪುನಃ ।**

ತಸ್ಮಿನ್ ಸೂಸೇ ನ್ಯತಿನಿಂದ್ಯಾತ್ |
ತತ್ತ್ರಿಕೋಣ ಗತೇಽಪಿ ವಾ | (ಅಷ್ಟಕವರ್ಗ)
ಲಗ್ನಂಗತೇ ದಿನಕರೇ ರಿಪುನೀಚ ಭಾಗೇ | ಜಾತಃ
ಕೃಶಾನುಯುಗಬಿಂದುಯುತೇಽತಿ ರೋಗೀ
ಬಾಣಾದಿ ಬಿಂದು ಸಹಿತೋಪಯುಗೇ ದಿನೇಶೇ |
ಸ್ವೋಚ್ಚೇಽಥವಾ ನಿಜಗೃಹೇ ನೃಪತಿಶ್ಚಿರಾಯುಃ |

ಯಾವ ಲಗ್ನದಲ್ಲಿ ರವಿ ಇರುವನೋ ಅವನು ತನ್ನ ಆರೋಗ್ಯ-ಅನಾರೋಗ್ಯಗಳನ್ನು ಸೂರ್ಯನ ಅಷ್ಟಕವರ್ಗದಿಂದ ತಿಳಿದುಕೊಳ್ಳಬಹುದು. ಲಗ್ನದಲ್ಲಿ ಶತ್ರು-ನೀಚ ಗೃಹದಲ್ಲಿ ರವಿ ಇದ್ದು, ಅವನು ೩-೨ ಬಿಂದುಗಳಿಂದ ಯುಕ್ತನಾಗಿದ್ದರೆ ಅವನು ಅನಾರೋಗ್ಯವಂತನಾಗುವನು. ಲಗ್ನದಲ್ಲಿ ಸೂರ್ಯನ ಉಚ್ಚರಾಶಿ (ಮೇಷ) ಸ್ವಕ್ಷೇತ್ರ (ಸಿಂಹ) ರಾಶಿ ಉದಿತವಿದ್ದು, ಅಲ್ಲಿ ೫ ರಿಂದ ೮ ರ ವರೆಗೆ ಬಿಂದುಗಳು ಬಿದ್ದಿದ್ದರೆ ಆರೋಗ್ಯವಂತನೂ ದೀರ್ಘಾಯುಷಿಯೂ ಆಗುವನು. ರಾಜಯೋಗಫಲವನ್ನು ಪಡೆಯುವನು.

ಕೇಂದ್ರ ತ್ರಿಕೋಣೋಪಗತೇ ದಿನೇಶೇ |
ಷಟ್ ಪಂಚ ಸಪ್ತಾಷ್ಟಕ ಬಿಂದುವರ್ಗೇ |
ರುದ್ರಾಮಲಾ ನೀಲಶರಾಬ್ಧಕೇಷು |
ಜಾತಸ್ಯ ವಾ ಜನಕಸ್ಯ ಮೃತ್ಯುಃ |

ಕೇಂದ್ರ (೧-೪-೭-೧೦) ತ್ರಿಕೋಣ (೫-೯) ಈ ಸ್ಥಾನದಲ್ಲಿ ರವಿ ಇದ್ದು ೬-೫-೭-೮ ಬಿಂದುಗಳಿಂದ ಕೂಡಿದ್ದರೆ, ೨೨-೩೫, ೩೦ ಅಥವಾ ೩೬ ವಯಸ್ಸಿನಲ್ಲಿ ತಂದೆಯ ಅಥವಾ ಜಾತಕನ ಮರಣದ ಸಂಭವವಿರುವದು. ಇಂತಹ ಸಂಗತಿಗಳನ್ನು ನಿರ್ಣಯಿಸುವಾಗ ಜ್ಯೋತಿಷಿಯು ಅಧಿಕಾರಯುಕ್ತನಾಗಿರುವನೋ, ಇಲ್ಲವೋ ಮೊದಲು ಆತ್ಮನಿರೀಕ್ಷಣೆ ಮಾಡಿಕೊಳ್ಳ-

ಬೇಕು. ಇಂದು ಅಲ್ಲಲ್ಲಿ ಜ್ಯೋತಿಷಿ-ನಾಮಧಾರಿಗಳು ತಾಂಡವ-ನರ್ತನ ನಡೆಸಿದ್ದಾರೆ. ಇಂಥವರಿಗೆ ಎಷ್ಟನಿತೂ, ಇಂತಹ ವಿಷಯಗಳನ್ನು ಹೇಳಲು ಅಧಿಕಾರವಿರುವದಿಲ್ಲ. 'ನಿರ್ಣಯಸ್ತ್ವಹ ಗುರೂಪದೇಶತೋ' ಎಂದು ಪ್ರಶ್ನ ಮಾರ್ಗಕರ್ತನ ಆದೇಶವಿರುವದು.

ಶೋಧ್ಯಾವಶಿಷ್ಟದ್ವಯ ಬಿಂದುಯಾತೇ ।
ಕೇಂದ್ರಸ್ಥಿತೇ ಸೇಂದು ಶನೀಂದು ಸೂನೌ ।
ಭಾನೌ ದಶಾಬ್ದಾತ್ ಪರತಃ ಸಮ್ಯದ್ಧ್ಯಾಂ ।
ತಾತಸ್ಯ ರಾಜ್ಯಶ್ರೀಯಮಾಹುರಾರ್ಯಾಃ ।

ಸೂರ್ಯನು ಚಂದ್ರ, ಶನಿ, ಬುಧ ಇವರಿಂದ ಯುಕ್ತನಾಗಿ ಕೇಂದ್ರದಲ್ಲಿದ್ದರೆ ತ್ರಿಕೋಣ ಏಕಾಧಿಪತ್ಯ ಶೋಧನದ ನಂತರ ಅವನಿಗೆ ೨ ಬಿಂದುಗಳು ಉಳಿದರೆ ಜಾತನ ೧೦ ವರುಷದ ನಂತರ ತಂದೆಗೆ ಮಹತ್ವಾದ ಅಧಿಕಾರ ಪ್ರಾಪ್ತಿ, ಕೀರ್ತಿ ದೊರಕುವದು.

ಲಗ್ನಾತ್ ಚಂದ್ರಾತ್ ಗುರುಸ್ಥಾನೇ
ಯಾತೇ ಸೂರ್ಯಸುತೇ ಯದಿ
ಪಿತೋರ್ನಾಶಂ ತದಾ ಕಾಲೇ
ಯೋಜಯೇತ್ ಕಾಲವಿತ್ತಮಃ ।

ಲಗ್ನದಿಂದಾಗಲಿ, ಚಂದ್ರನಿಂದಾಗಲಿ ೯ ನೆಯ ಸ್ಥಾನದಲ್ಲಿ ಶನಿಯು ಸಂಚಾರಮಾಡುವಾಗ ತಂದೆಯು ಅಥವಾ ತಾಯಿಯು ಮರಣ ಸಂಭವ. ಆಗ ಆ ಗೋಚರ ಶನಿ ಪಾಪಗ್ರಹಗಳಿಂದ ಯುಕ್ತನಾಗಿದ್ದರೆ, ದೃಷ್ಟನಾಗಿದ್ದರೆ ದಶಾಂತರದಶೆಗಳನ್ನು ನೋಡಿ ಕಾಲಜ್ಞಾನಿಯು ಹೇಳಬೇಕು.

ಲಗ್ನಾತ್ ಸುಖೇಶ ರಾಶೀಶ ದಶಯೋಂಚ ಪಿತೃಕ್ಷಯಃ ।
ಸುಖನಾಥದಶಾಯಾಂ ಚ ಬಂಧುಪ್ರಾಪ್ತೇರ್ನಸಂಶಯಃ ।

ಚತುರ್ಥಾಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶೀಶನ ದಶೆಯಲ್ಲಿ ಪಿತೃಪೀಡೆ ಅಥವಾ ಚತುರ್ಥಾಧಿಪತಿಯ ದಶಾಂತರ್ದಶೆಯಲ್ಲಿ ಪಿತೃಮರಣ ಸಂಭವವಿರುವದು.

ಅರ್ಕಸ್ಯೈವಾಷ್ಟವರ್ಗೇ ರವಿಗುಣನಿಚಯಂ ಜೀವ-
ಕಾಯಸ್ಥಿತಾಕ್ಷೈಃ ।
ಭಾನೋರಸ್ತತ್ರಿಕೈರ್ವಾ ಪೃಥಗಪಿ ನಿಹತಂ ಭಾಜಯೇ-
ದ್ವೇಚ ಸಾರ್ಕೈಃ ॥
ಶಿಷ್ಟಂ ಯುಡ್ವೋಭಯತ್ರ ದ್ವಯಮಪಿ ಗಣಯೇದ್ದಸ್ರ
ತೋತ್ರಾಗತರ್ಕ್ಷೇ
ಸ್ವಸ್ವಾಸ್ತಾಕ್ಷಕ್ರಿಯಾಪ್ತೇ ಧಿಷಣ ದಿನಕೃತೋಃಸ್ತತಹಾ
ಚಾರಕಾಲಃ ।

ಸೂರ್ಯನ ಅಷ್ಟಕವರ್ಗದಲ್ಲಿ ಗುರುವಿನಿಂದ ೭ ನೆಯ ಮನೆಯಲ್ಲಿರುವ ಬಿಂದುಗಳ ಸಂಖ್ಯೆಯಿಂದ ( ಶೋಧನದ ಪೂರ್ವದಲ್ಲಿರುವ ) ಸೂರ್ಯನ ಶೋಧ್ಯಪಿಂಡಕ್ಕೆ ಗುಣಾಕಾರ ಮಾಡಿರಿ. ಬಂದ ಗುಣಾಕಾರವನ್ನು ೨೭ ರಿಂದ ಭಾಗಿಸಿರಿ. ಶೇಷವನ್ನು ಅಶ್ವಿನೀ ನಕ್ಷತ್ರದಿಂದ ಎಣಿಸಿರಿ. ಯಾವ ನಕ್ಷತ್ರ ಬರುವದೋ ಆ ನಕ್ಷತ್ರದಲ್ಲಿ ಗುರುವಿನ ಸಂಚಾರ ಜಾತನಿಗೆ ಮಾರಕವಾಗುವ ಸಂಭವ. ಇದರಂತೆ ಸೂರ್ಯನ ಅಷ್ಟಕವರ್ಗದಲ್ಲಿ ಸೂರ್ಯನಿಂದ ಏಳನೆಯ ಮನೆಯಲ್ಲಿರುವ ಬಿಂದುಗಳ ಸಂಖ್ಯೆಯಿಂದ ಸೂರ್ಯನ ಶೋಧ್ಯ ಪಿಂಡಕ್ಕೆ ಗುಣಿಸಿ ೨೭ ರಿಂದ ಭಾಗಿಸಿರಿ. ಉಳಿದ ಸಂಖ್ಯೆಯನ್ನು ಅಶ್ವಿನಿಯಿಂದ ಎಣಿಸಬೇಕು. ಆ ನಕ್ಷತ್ರದಲ್ಲಿ ರವಿಯ ಸಂಚಾರ ತಾತಮಾರಕವಾಗುವ ಸಂಭವ.

# ಚಂದ್ರನ ಅಷ್ಟಕವರ್ಗ

ಚಂದ್ರವಿರುವ ಠಾಣದಿಂದ ೧-೩-೬-೭-೧೦-೧೧ ರಲ್ಲಿ ಒಂದೊಂದು ಬಿಂದುಗಳನ್ನಿಡಬೇಕು.

ಮಂಗಳನಿರುವ ಜಾಗೆಯಿಂದ ೨-೩-೫-೬-೯-೧೦ ಹಾಗೂ ೧೧ ರಲ್ಲಿ ಬಿಂದುಗಳನ್ನಿಡಬೇಕು.

ಬುಧನಿರುವ ಜಾಗೆಯಿಂದ ೧-೩-೪-೫-೭-೮-೧೦-೧೧ ರಲ್ಲಿ ಬಿಂದುಗಳು.

ಗುರು ಇರುವ ಠಾಣದಿಂದ ೧-೨-೪-೭-೮-೧೦-೧೧ ರಲ್ಲಿ ಬಿಂದು-ಗಳನ್ನಿಡಿರಿ.

ಶುಕ್ರನಿರುವ ಠಾಣದಿಂದ ೩-೪-೫-೭-೯-೧೦-೧೧ ರಲ್ಲಿ ಬಿಂದು-ಗಳು ಬರುವವು.

ಶನಿ ಇರುವ ಠಾಣದಿಂದ ೩-೫-೬-೧೧-ರಲ್ಲಿ; ಲಗ್ನದಿಂದ ೩-೬-೧೦-೧೧ ರಲ್ಲಿ ಬಿಂದುಗಳು. ಸೂರ್ಯನಿರುವ ಜಾಗೆಯಿಂದ ೩-೬-೭-೮-೧೦-೧೧ ರಲ್ಲಿ; ಬಿಂದುಗಳು. ಪ್ರತಿಯೊಂದು ಭಾವದಲ್ಲಿ ಬಿದ್ದ ಬಿಂದು-ಗಳನ್ನು ಎಣಿಸಿದರೆ ಒಟ್ಟು ೪೯ ಬಿಂದುಗಳಾಗುವವು.

ಉದಾಹೃತ ಕುಂಡಲಿಯಲ್ಲಿ ಚಂದ್ರನು ಚತುರ್ಥದಲ್ಲಿರುವನು. ಅವ-ನಿಂದ ಎಣಿಸಿ ಬಿಂದುಗಳನ್ನು ಇಡಲಾಗಿ ಪ್ರತಿ ಭಾವದಲ್ಲಿ ಬಿದ್ದ ಬಿಂದು-ಗಳ ಒಟ್ಟು ಸಂಖ್ಯೆ ೪೯ ಆಗಿದೆ. ಇವು ಚಂದ್ರನ ಅಷ್ಟಕವರ್ಗ-ದಲ್ಲಿಯ ಬಿಂದುಗಳು.

**ವೃಷಭ, ಮಕರ**, ಕುಂಭಗಳಲ್ಲಿ ೬ ಬಿಂದುಗಳಿರುವವು. ಇದರ ಫಲ

ಈ ರಾಶಿಯಲ್ಲಿ ಚಂದ್ರನ ಸಂಚಾರವಿದ್ದಾಗ ಮಂತ್ರೋಪದೇಶ, ಸದ್ಗುಣಿ ಬ್ರಾಹ್ಮಣರ ಸಹವಾಸಗಳು ಸಂಭವಿಸುವವು.




ಸಿಂಹದಲ್ಲಿ ೭ ಬಿಂದುಗಳಿರುವವು. ಈ ರಾಶಿಯಲ್ಲಿ ಚಂದ್ರನ ಸಂಚಾರ ವಿರುವಾಗ ಸುಂದರ ವಸ್ತುಗಳ ಸಂದರ್ಶನ, ರುಚಿಕರವಾದ ಆಹಾರ, ಸುಗಂಧ ಸಂಸ್ಪೃಶ್ಯ ಮೇಜವಾನಿಯ ಸಂದರ್ಭಗಳು ಬರಬಹುದು. ಮಿಥುನ - ಕರ್ಕದಲ್ಲಿ, ಧನುವಿನಲ್ಲಿ ೪ ಬಿಂದುಗಳಿರುವವು. ಸಾಮಾನ್ಯಸುಖ-ದಾಯಕ.

ಕನ್ಯಾವಲ್ಲಿ ೩ ಬಿಂದುಗಳು. ಬಂಧುಮಿತ್ರರಿಂದ ಅಗಲುವಿಕೆ.

ಮೇಷದಲ್ಲಿ ೨ ಬಿಂದುಗಳು. ಆಪ್ತರ ಕೂಡ ಕಲಹ - ಪ್ರಸಂಗಗಳು, ಧನದ ವೆಚ್ಚ.

ವೃಶ್ಚಿಕ-ಮೀನಗಳಲ್ಲಿ ೧ ಬಿಂದು. ಈ ರಾಶಿಯಲ್ಲಿ ಚಂದ್ರನ ಸಂಚಾರ

ವಾದಾಗ ತೊಂದರೆಗಳುಂಟಾಗುವವು.

ಶೀತಾಂಶೋರಷ್ಟವರ್ಗೇ ಬಹು ಫಲಭವನೇ ಸನ್ನಿಪಣ್ಣೇ
ಶಶಾಂಕೇ ।
ಚೌಲಾದ್ಯಂ ಕರ್ಮ ಕುರ್ಯಾತ್ ಸಕಲಮಭಿಮತಂ
ಪ್ರಾರಭೇತಾಪಿ ಕಾರ್ಯಂ ।
ಪೂರ್ಣಾಕ್ಷಕ್ಷೇಂದು ಜಾತಾ ಯುವತಿರಪಿ ಪತಿಃ
ಭೂಪತಿಃ ಸೇವಕೋವಾ ।
ಭೃತ್ಯಶ್ಶಾಸ್ತ್ರೋ ಗುರುರ್ವಾ ಸಹೃದಪಿ ನಿಯತಂ
ಸಂಪದೇ ಸಂಭವೇಯುಃ ।

ಉದಾಹೃತ ಕುಂಡಲಿಯಲ್ಲಿ ಸಿಂಹರಾಶಿಯಲ್ಲಿ ೭ ಬಿಂದುಗಳು ಬಿದ್ದಿರುವವು. ಈ ರಾಶಿಯಲ್ಲಿ ಚಂದ್ರನ ಸಂಚಾರವಿದ್ದಾಗ ಚೌಲಾದಿ ಧಾರ್ಮಿಕ ಕಾರ್ಯಗಳನ್ನು ಮಾಡಬೇಕು. ಮತ್ತು ಪ್ರಶಸ್ತ ಕಾರ್ಯಗಳನ್ನು ಈ ರಾಶಿಯಲ್ಲಿ ಚಂದ್ರನ ಸಂಚಾರವಿದ್ದಾಗ ಪ್ರಾರಂಭಿಸಬೇಕು. ಈ ರಾಶಿಯಲ್ಲಿ ಹುಟ್ಟಿದ ಸ್ತ್ರೀ, ಪತಿ, ಅರಸು, ಸೇವಕ, ಶಿಷ್ಯ, ಗೆಳೆಯರು, ಜಾತಕನಿಗೆ ಹಿತಕರ್ತರಾಗುವರು.

ಪೂರ್ಣಾಕ್ಷಕ್ಷೇಂದುಜಾತಾನಾಂ
ಪ್ರಾತರ್ದರ್ಶನಮುತ್ತಮಂ ।
ತೇಭ್ಯೋ ವಸ್ತ್ರಾದಿದಾನಂ ಚ
ಭವೇನ್ನೂನಂ ಸಮೃದ್ಧಯೇ ॥

ಪೂರ್ಣಬಿಂದುಗಳು ಅಂದರೆ ೮. ಜಾತನ ಕುಂಡಲಿಯಲ್ಲಿ ಇಲ್ಲಿ ೮ ಬಿಂದುಗಳು ಯಾವ ರಾಶಿಯಲ್ಲಿಯೂ ಬಿದ್ದಿರುವದಿಲ್ಲ. ಅಂದರೆ ಸಿಂಹ ರಾಶಿಯಲ್ಲಿ ೭ ಬಿಂದುಗಳು, ವೃಷಭ, ಕುಂಭ, ಮಕರಗಳಲ್ಲಿ ೬ ಬಿಂದುಗಳಿರುವವು. ಕಾರಣ ಈ ರಾಶಿಯಲ್ಲಿ ಹುಟ್ಟಿದವರ ಮುಖದರ್ಶನ ಬೆಳಿಗ್ಗೆ

ಮಾಡಬೇಕು. ಇವರಿಗೇ ವಸ್ತ್ರಾನ್ನ ದಾನಾದಿಗಳನ್ನು ಮಾಡಬೇಕು. ಇದು ಜಾತನಿಗೆ ಕಲ್ಯಾಣವನ್ನುಂಟುಮಾಡುವದು.

ಶೂನ್ಯಾಕ್ಷಗೇ ಶಶಿನಿ ಕರ್ಮ ಶುಭಂ ನ ಕುರ್ಯಾತ್ |
ಪ್ರಾರಬ್ಧಮತ್ರ ವಿಫಲಂ ಸಕಲಂ ಹಿ ಕಾರ್ಯಂ |
ಸ್ವಲ್ಪಾಕ್ಷಭೋಕ್ಷ್ಯ ಸಹ ವರ್ತನ ಮಾತ್ರಮೇಷಾಂ ಪ್ರಾತರ್ವಿ
ಲೋಕನಮುಖೇಹ ಭೃಶಂ ವಿಪತ್ತ್ಯೈ ||

ಉದಾಹೃತ ಕುಂಡಲಿಯಲ್ಲಿ ಶೂನ್ಯಬಿಂದು ಬಿದ್ದಿರುವದಿಲ್ಲ. ಶೂನ್ಯ ಬಿದ್ದರಾಶಿಯಲ್ಲಿ ಶನಿ, ಚಂದ್ರನ ಸಂಚಾರವಿದ್ದಾಗ ಯಾರೂ ಶುಭಕರ್ಮ-ವನ್ನು ಮಾಡಬಾರದು. ಪ್ರಾರಬ್ಧ ಕಾರ್ಯವು ವಿಫಲವಾಗುವದು.

ಉದಾಹೃತ ಕುಂಡಲಿಯಲ್ಲಿ ಮೀನ; ವೃಶ್ಚಿಕಗಳಲ್ಲಿ ೧ ಬಿಂದು ಬಿದ್ದಿರುವದು. ಈ ರಾಶಿಯಲ್ಲಿ ಹುಟ್ಟಿದವರ ಮುಖವನ್ನು ಬೆಳಿಗ್ಗೆ ನೋಡ-ಕೂಡದು. ಇದು ವಿಪತ್ತನ್ನು ತರುವದು. ಇಂಥವರ ಸಹವಾಸವೂ ಹಿತಕರವಾಗಲಾರದು.

ಸ್ನಾನೇ ಚ ಪಾನೇ ಚ ಫಲಾಧಿಕಾಶಾ |
ತಟಾಕ ಕೂಪಾದಿ ಜಲಂ ಹಿತಂ ಸ್ಯಾತ್ |
ದುರ್ಗಾ ಚ ರಾಜ್ಞೀ ಚ ದೀಶಿಹದ್ಯಾ |
ಸ್ವಲ್ಪಾಕ್ಷದಿಕ್ಕೇ ತದಸತ್ ಸಮಸ್ತಂ |

ಪೂರ್ವದಿಕ್ಕಿನ ವಾಪೀಕೂಪ ತಟಾಕಗಳಿಂದ ಜಲವನ್ನು ಸಂಗ್ರಹಿಸಬೇಕು. ಸಿಂಹದಲ್ಲಿ ೭ ಬಿಂದುಗಳಿರುವವು. ಸಿಂಹ ಪೂರ್ವಕ್ಕೆ ಮಕರ, ಕುಂಭ, ದಕ್ಷಿಣ, ಪಶ್ಚಿಮ ದಿಕ್ಕಿನ ಜಲಾಶಯದ ನೀರೂ ಹಿತಕರ. ಅಲ್ಲಿ ೬ ಬಿಂದುಗಳಿರುವವು.

ಚಂದ್ರನು ಲಗ್ನದಲ್ಲಿ ೧-೨-೩ ಬಿಂದುಗಳಿಂದ ಯುಕ್ತನಾಗಿದ್ದರೆ

ಜಾತನು ರೋಗಿಯಾಗುವನು. ಈ ಯೋಗವಿದ್ದು ೨-೩ ಗ್ರಹಗಳಿಂದ ಯುಕ್ತನಾಗಿದ್ದರೆ (ಪಾಪಗ್ರಹಗಳು) ೩೭ ನೆಯ ವರ್ಷ ಮೃತ್ಯು ಸಂಭವ. ಉದಾಹೃತ ಕುಂಡಲಿಯಲ್ಲಿ ಈ ಯೋಗವಿಲ್ಲ. ಕೇಂದ್ರ, ತ್ರಿಕೋಣ, ಲಾಭದಲ್ಲಿ ಚಂದ್ರನು ನೀಚರಾಶಿಯಲ್ಲಿ ವೃದ್ಧಿಕಲಾಹೀನನಾಗಿ ೨ ಇಲ್ಲವೆ ೩ ಬಿಂದುಗಳಿಂದ ಕೂಡಿದ್ದರೆ ಆ ಭಾವ ಫಲನಾಶವಾಗುವದು.

ಉದಾಹೃತ ಕುಂಡಲಿಯಲ್ಲಿ ಈ ಯೋಗವಿಲ್ಲ. ಉದಾಹೃತ ಕುಂಡಲಿಯಲ್ಲಿ ಚಂದ್ರನು ಚತುರ್ಥ ಕೇಂದ್ರದಲ್ಲಿ ೭ ಬಿಂದುಗಳಿಂದ ಕೂಡಿರುವನು. ಗೃಹಸೌಖ್ಯ, ಭೂಮಿ-ಸೌಖ್ಯಗಳನ್ನು ಕೊಡುವನು. ಆಯುಷ್ಯದ ಕಡೆಯ ಭಾಗ ಹಿತಕರ.

**ವೇದ ಬಿಂದುಯುತ ಕೋಣ ಚತುಷ್ಟಯೇ ವಾ ।**
**ಲಾಭೇ ವಿಧೌ ಬಲಯುತೇ ಯದಿ ಭಾವ ವೃದ್ಧಿಃ ।**
**ಬಿಂದ್ವಷ್ಟಕೇ ಶಶಿನಿ ಕೇಂದ್ರಯುತೇ ಚ ಜಾತಾ ವಿದ್ಯಾ-**
**ಯಶೋ ಧನ ಪ್ರಬಲಾ ನರೇಂದ್ರಾಃ ।**

ಕೇಂದ್ರದಲ್ಲಿ, ತ್ರಿಕೋಣದಲ್ಲಿ, ಲಾಭದಲ್ಲಿ ಚಂದ್ರನು ಉಚ್ಚದಲ್ಲಿ ಸ್ವಕ್ಷೇತ್ರದಲ್ಲಿ ಅಥವಾ ಕಲಾಭಿವೃದ್ಧಿಯಲ್ಲಿ ೪ ಅಥವಾ ನಾಲ್ಕಕ್ಕಿಂತ ಹೆಚ್ಚು ಬಿಂದುಗಳಿಂದ ಕೂಡಿದ್ದರೆ ರಾಜಯೋಗ ಸುಖವನ್ನು ಪಡೆಯುವನು.

ಇಲ್ಲಿ ಚಂದ್ರನು ಕೇಂದ್ರದಲ್ಲಿ ಮಿತ್ರಕ್ಷೇತ್ರದಲ್ಲಿ ೭ ಬಿಂದುಗಳಿಂದ ಕೂಡಿರುವನು. ಶ್ರೀ ರಾಜಯೋಗ ಫಲವನ್ನು ಕೊಡುವನು.

**ಕನ್ಯಾಯಾ ಜನ್ಮೇಂದೋಶ್ಚಾಷ್ಟಕವರ್ಗೇ ।**
**ಫಲಾಧಿಕೇ ರಾಶೌ ।**
**—ಪುರುಷಸ್ಯ ಜನ್ಮ ಶುಭದಂ ।**
**ಪುರುಷೇಂದು ವಶಾತ್ ತಥೈವ ಕನ್ಯಾಯಾಃ ॥**

ವರನ, ಚಂದ್ರನ ಅಷ್ಟಕವರ್ಗದಲ್ಲಿ ಯಾವ ರಾಶಿಯಲ್ಲಿ ಹೆಚ್ಚು ಬಿಂದುಗಳು ಬಿದ್ದಿರುವವೋ ಆ ರಾಶಿಯ ಕನ್ಯೆಯನ್ನು ಅವನು ವರಿಸ-ಬೇಕು. ಇದರಂತೆ ಕನ್ಯೆಯ, ಚಂದ್ರನ ಅಷ್ಟಕವರ್ಗದಲ್ಲಿ ಹೆಚ್ಚು ಬಿಂದುಗಳು ಬಿದ್ದಿರುವ ರಾಶಿಯ ವರನನ್ನು ವಧುವು ವರಿಸಬೇಕು. ಇದು ಹಿತಕಾರಿಯಾಗುವದು.

## ಚಂದ್ರನ ಅಷ್ಟಕ ವರ್ಗದಲ್ಲಿ ತ್ರಿಕೋಣ ಶೋಧನ



## ಏಕಾಧಿಪತ್ಯ ಶೋಧನ




**ರಾಶಿ ಗುಣಾಕಾರ :—**

ವೃಷಭ ೨×೧೦=೨೦
ಕರ್ಕ ೩× ೪=೧೨
ಸಿಂಹ ೫×೧೦=೫೦
ಧನು ೨× ೯=೧೮
ಮಕರ ೧× ೫= ೫
ಕುಂಭ ೨×೧೧=೨೨

ರಾಶಿಪಿಂಡ ೧೨೭

**ಗ್ರಹ ಗುಣಾಕಾರ :—**

ಗುರು ೩×೧೦=೩೦
ಚಂದ್ರ ೫×೫=೨೫
ಬುಧ ೨×೫=೧೦

ಗ್ರಹಪಿಂಡ ೬೫

೧೨೭ ರಾಶಿಪಿಂಡ
೬೫ ಗ್ರಹಪಿಂಡ
——
೧೯೨ ಶೋಧ್ಯಪಿಂಡ

**ಶೀತಾಂಶೋಃ ತತ್ ಚತುರ್ಥಸ್ಥಿತ ಫಲನಿಹತೇ ಶೋಧ್ಯ-
ಪಿಂಡೇ ಸುಖಾತ್ಸ್ಯೇ |
ದಸ್ರಾತ್ ಸಂಗಣ್ಯ ಶೇಷಂ ಯದುಡು ತದಿತನಕ್ಷತ್ರಜೇ
ಮಾತೃನಾಶಃ |**

ಚಂದ್ರನ ಶೋಧ್ಯಪಿಂಡವನ್ನು ಚಂದ್ರನಿಂದ ೪ ರಲ್ಲಿ ಶೋಧನಕ್ಕಿಂತ ಪೂರ್ವದಲ್ಲಿ ಬಿದ್ದ ಬಿಂದುಸಂಖ್ಯೆಯಿಂದ ಗುಣಿಸಿ ೨೭ ರಿಂದ ಭಾಗಿಸಲಾಗಿ ಉಳಿದ ಸಂಖ್ಯೆಯ ವರೆಗೆ ಅಶ್ವಿನಿಯಿಂದ ಅಥವಾ ಜನ್ಮಕುಂಡಲಿಯಲ್ಲಿರುವ ಶನಿ ಇರುವ ನಕ್ಷತ್ರದಿಂದ ಎಣಿಸಲಾಗಿ ಅಷ್ಟನೇ ನಕ್ಷತ್ರದಲ್ಲಿ ಶನಿಯ ಸಂಚಾರ ಮಾತೃನಾಶಕ್ಕೆ ಕಾರಣವಾಗುವದು.

| | |
|---|---|
| ಚಂದ್ರನ ಶೋಧ್ಯಪಿಂಡ | ೧೯೨ |
| ಚಂದ್ರನಿಂದ ೪ ರಲ್ಲಿ ೧ ಬಿಂದು ಇರುವದು | × ೧ |
| | ೧೯೨ |

೧೯೨ ಕ್ಕೆ ೨೭ ರಿಂದ ಭಾಗಿಸಲಾಗಿ ೩ ಉಳಿಯುವದು.

ಅಶ್ವಿನಿಯಿಂದ ೩ ನೆಯ ನಕ್ಷತ್ರ ಕೃತ್ತಿಕಾ. ಕೃತ್ತಿಕಾದಲ್ಲಿ ಶನಿಯ ಸಂಚಾರವಿದ್ದಾಗ ೧೯೪೨ ಜನೇವರಿಯಲ್ಲಿ ಮಾತೃ ಮರಣವುಂಟಾಗಿರುವದು.

**ಚಂದ್ರಾತ್ ಸುಖ ಫಲಾತ್ ಪಿಂಡಂ ವರ್ಧಯೇತ್
ಶೋಧ್ಯ ಪೂರ್ವವತ್ |
ಶೇಷರ್ಕ್ಷೇ ಚ ಶನೌಯಾತೇ ಮಾತೃಹಾನಿಂ
ವಿನಿರ್ದಿಶೇತ್ |**

**ತತ್ತ್ರಿಕೋಣೇಷು ವಾಕೇಚೇತ್ ದಶಾಚ್ಛಿದ್ರೇಷು**
**ಕಲ್ಪಯೇತ್ ।**
**ಚಂದ್ರಾತ್ ಶುಭಫಲೈಃ ಪಿಂಡಂ ಹತ್ವಾ**
**ತಾರಾವಶೇಷಿತಂ ।**
**ಶನೌ ಯಾತೇ ಮಾತೃಹಾನಿಃ ತ್ರಿಕೋಣಾರ್ಕ್ಷ**
**ಗತೇಽಪಿ ವಾ ।**

ಆ ನಕ್ಷತ್ರ ಅಶ್ವಿನಿಯಿಂದ ಅಥವಾ ಶನಿಗತ (ಜನ್ಮಕಾಲೀನ) ನಕ್ಷತ್ರದಿಂದ ಆಗಬಹುದು. ತತ್ತ್ರಿಕೋಣ ನಕ್ಷತ್ರವಾದರೂ ಆಗಬಹುದು. ದಶಾಚ್ಛಿದ್ರವನ್ನೂ ಲಕ್ಷಿಸಿ.



# ಮಂಗಳನ ಅಷ್ಟಕವರ್ಗ

ಮಂಗಳಸಿಂದ ೧-೨-೪-೭-೮-೧೦-೧೧ ರಲ್ಲಿ ಬಿಂದುಗಳನ್ನಿಡಿರಿ. ಬುಧನಿಂದ ೩-೫-೬-೧೧ ರಲ್ಲಿ ಬಿಂದುಗಳನ್ನು ಇಡಿರಿ. ಗುರುವಿನಿಂದ ೬-೧೦-೧೧-೧೨ ರಲ್ಲಿಡಬೇಕು. ಶುಕ್ರಸಿಂದ ೬-೮-೧೧-೧೨ ರಲ್ಲಿ ಬಿಂದುಗಳು ಬರುವವು. ಶನಿಯಿಂದ ೧-೪-೭-೮-೯-೧೦-೧೧ ರಲ್ಲಿ ಒರುವವು. ಲಗ್ನದಿಂದ ೧-೩-೬-೧೦-೧೧ ರಲ್ಲಿ ಇರಿಸಬೇಕು. ಸೂರ್ಯನಿಂದ ೩-೫-೬-೧೦-೧೧ ರಲ್ಲಿ, ಚಂದ್ರಸಿಂದ ೩-೬-೧೧ ರಲ್ಲಿ. ಒಟ್ಟು ಮಂಗಳನ ಅಷ್ಟಕವರ್ಗದಲ್ಲಿ ೩೯ ಬಿಂದುಗಳಾಗುವವು.

**ಉದಾಹೃತ ಕುಂಡಲಿಯಲ್ಲಿ**




ಒಟ್ಟು ೩೯ ಬಿಂದುಗಳು.

ರಾಶಿ ಗುಣಾಕಾರ :— ಗ್ರಹ ಗುಣಾಕಾರ :—

| | | | |
|---|---|---|---|
| ವೃಷಭ | ೧×೧೦=೧೦ | ಗುರು. | ೧×೧೦=೧೦ |
| ಮಿಥುನ | ೧× ೮= ೮ | ಮಂ. | ೨× ೮=೧೬ |
| ಕರ್ಕ | ೧× ೪= ೪ | ಶು. | ೨× ೭=೧೪ |
| ಧನು | ೩× ೯=೨೭ | | —— |
| ಮಕರ | ೨× ೫=೧೦ | | ೪೦ ಗ್ರಹಪಿಂಡ |
| ಮೇಷ | ೨× ೭=೧೪ | | |

——

೭೩ ರಾಶಿಪಿಂಡ

೭೩+೪೦=೧೧೩ ಶೋಧ್ಯಪಿಂಡ.

ಮಂಗಳನಿಗೆ ೮ ಬಿಂದುಗಳು ಬಿದ್ದಿದ್ದರೆ ಧನಸಂಪಾದನೆ, ಭೂಮಿ-ಲಾಭ, ಶತ್ರುಗಳನ್ನು ಗೆಲ್ಲುವದು.

೭ ಬಿಂದುಗಳಿದ್ದರೆ ಅಣ್ಣ–ತಮ್ಮಂದಿರಿಂದ ಧನಲಾಭ, ಅವರಿಗೂ ಲಾಭ. ಭಾಗ್ಯಲಾಭ.

೬ " ಅರಸನ ಯಜಮಾನನ ಪ್ರೀತಿ.

೫ " ಪ್ರೀತಿಯನ್ನು ಹುಟ್ಟಿಸುವ ಆಚಾರ, ಸುಂದರಚರ್ಯೆ.

೪ " ಸುಖ–ದುಃಖ ಸಮಾನತೆ. ಸಾಮಾನ್ಯ ಸುಖ.

೩ " ಬಂಧುವಿಯೋಗ.

೨ " ಬಯಸಿದ ಧನತ್ಯಾಗಿ ಕಲಹ. ಬಂಧುಗಳ ಹೆಂಡತಿಯ ವಿರಹ, ವಿರೋಧಿಗಳ ಪೀಡೆ.

೧ " ಶಾರೀರ ಪೀಡೆ, ಜ್ವರ, ಪೈಲಿ ಬಾಧೆ.

೦ " ಬಿಂದು ಬಿದ್ದಿದ್ದರೆ, ಅನ್ನಕೋಶ–ಬಾಧೆ. ಮೂರ್ಛಾ, ಮರಣ ಭಯ.

ಉದಾಹೃತ- ಕುಂಡಲಿಯಲ್ಲಿ ಮಂಗಳನು ಸ್ವಕ್ಷೇತ್ರದಲ್ಲಿರುವನು. ಆದರೂ ಅವನಿಗೆ ೩ ಬಿಂದುಗಳಿರುವವು. ಸಾಮಾನ್ಯ ಸುಖ. ಅವನಿಗೆ ೩ ಬಿಂದುಗಳಿರುವದರಿಂದ, ೧೨ ರಲ್ಲಿ ಇರುವದರಿಂದ, ಸಹೋದರ ವಿಯೋಗ ವಾಗಿದೆ. ದೇವಕೇರಲದಲ್ಲಿ ಹೇಳಿದಂತೆ— 'ಲಗ್ನವು ಸ್ಥಿರ ರಾಶಿಯಲ್ಲಿದ್ದು ಮಂಗಳನು ೧ ರಿಂದ ೩ ಬಿಂದುಗಳನ್ನು ಪಡೆದಿದ್ದರೆ ಸಹೋದರವಿಯೋಗ.'

ಸಿಂಹ ರಾಶಿಯಲ್ಲಿ ಮಂಗಳನಿಗೆ ೧ ಬಿಂದು ಇರುವದು. ಆದ್ದರಿಂದ ಗೋಚರೀ ಮಂಗಳನು ಸಿಂಹದಲ್ಲಿ ಸಂಚರಿಸುವಾಗ ಪೀಡಾಕಾರಿ.

ವೃಷಭ, ಮಿಥುನ, ಕರ್ಕ, ತುಲಾ, ಧನು, ಮಕರಗಳಲ್ಲಿ ಸಾಮಾನ್ಯ ಶುಭ.

**ಭೂಮಿಜೇ ಸಹಜಸ್ಥಾನೇ ರೂಪತಾಂ ವಿದ್ಯತೇ ಫಲಂ।**
**ಶತ್ರುನೀಚ ಗ್ರಹಂ ತ್ಯಕ್ತ್ವಾ ಶಾಂತಃ ಸಹಜಾಃ ಸ್ಮೃತಾಃ ॥**

ಮಂಗಳನಿಂದ ೩ ರಲ್ಲಿರುವ ಬಿಂದುಗಳಿಂದ ಸಹಜ ಸಂಖ್ಯೆಯನ್ನು ಹೇಳುವರು; ಶತ್ರುನೀಚ ಗ್ರಹಗಳು ಕೊಟ್ಟ ಬಿಂದುಗಳನ್ನುಳಿದು.

**ಸ್ವೋಚ್ಚೇ ಸ್ವಕೇ ಗುರು ಸುಖೋದಯ ಮಾನಯಾತೇ ।**
**ಬಿಂದ್ವಷ್ಟಕೇ ಚ ಯದಿಕೋಟಿ ಧನಪ್ರಭುಃ ಸ್ಯಾತ್ ।**
**ಚಾಪಾಜ ಸಿಂಹ ಮೃಗಕೀಟ ವಿಲಗ್ನ ಸಂಸ್ಥೇ ।**
**ಭೌಮೇ ಚತುಷ್ಟಯ ಫಲೋಪಗತೇ ಚ ರಾಜಾ ।**

ಮಂಗಳನು ಸ್ವಕ್ಷೇತ್ರ ಉಚ್ಚದಲ್ಲಿದ್ದು ೯-೪ ೧೦-೧೧ ಭಾವದಲ್ಲಿದ್ದು, ೮ ಬಿಂದುಗಳಿಂದ ಕೂಡಿದ್ದರೆ ಕೋಟ್ಯಧೀಶರಾಗುವರು. ದೊಡ್ಡ ಕಾರಖಾನೆ ನಡೆಸುವವರ ಕುಂಡಲಿಗಳನ್ನು ವಾಚಕರು ಪರೀಕ್ಷಿಸಲಿ.

ಧನ - ಮೇಷ - ಸಿಂಹ - ಮಕರ - ವೃಶ್ಚಿಕ ರಾಶಿಗಳಲ್ಲಿ ಲಗ್ನವಿದ್ದು ಅಲ್ಲಿ ಮಂಗಳನು ೪ ಬಿಂದುಗಳಿಂದ ಕೂಡಿದ್ದರೂ ರಾಜಯೋಗ.

ಮಂಗಳನು ಎಲ್ಲಿಯೇ ಇರಲಿ, ೮ ಬಿಂದುಗಳಿಂದ ಕೂಡಿದ್ದರೆ ಸಾಮಾನ್ಯ ರಾಜಯೋಗ. ಆದರೆ ಲಗ್ನ ದಶಮದಲ್ಲಿ ೮ ಬಿಂದುಗಳಿಂದ ಕೂಡಿದ್ದರೆ ಮಹಿಪತೀ ಯೋಗ.

ಭ್ರಾತೃ ಸಂಖ್ಯೆಯನ್ನು ಹೇಳುವಾಗ ಮಂಗಳನ ವಿಚಾರವನ್ನು ಮಾಡುವರು. ಮಂಗಳನು ದಾಟಿದ ನವಾಂಶದಿಂದ ಹೇಳುವರು. ಅವನು ೫ ರಲ್ಲಿದ್ದು ೩ ಬಿಂದುಗಳಿಂದ ಕೂಡಿದ್ದರೆ ಮಂಗಳನಿಗೆ ಬಿದ್ದ ಬಿಂದು ಸಂಖ್ಯೆಗಳಿಂದ ಅಥವಾ ಲಗ್ನದಿಂದ ತ್ರಿಕೋಣ ಶೋಧನದ ನಂತರ ಬಿದ್ದ ಬಿಂದುಗಳಿಂದ ಹೇಳುವರು.

ಮಂಗಳನು ೩–೪ ಬಿಂದುಗಳಿಂದ ಕೂಡಿ ೧೦ ರಲ್ಲಿದ್ದರೆ ರಾಜಯೋಗ, ಇಲ್ಲವೆ ತನ್ನ ಕುಲದಲ್ಲಿ ನಾಯಕನಾಗುವನು.

| | |
|---|---|
| ಮಂಗಳನ ಶೋಧ್ಯಪಿಂಡ. | ೧೧೩ |
| ಮಂಗಳನಿಂದ ೩ ರಲ್ಲಿ ಇರುವ ಬಿಂದುಗಳು, | ×೪ |
| ೪ ರಿಂದ ಗುಣಿಸಿ ಅದಕ್ಕೆ ೨೭ ರಿಂದ ಭಾಗಿಸಬೇಕು | ೨೭) ೪೫೨ (೧೬ |
| | ೨೭ |
| | ೧೮೨ |
| | ೧೬೨ |
| | ೨೦ |

೨೦ ನೆಯ ನಕ್ಷತ್ರ ಪೂರ್ವಾಷಾಢಾ. ಪೂರ್ವಾಷಾಢಾ ಅಥವಾ ತ್ರಿಕೋಣ ನಕ್ಷತ್ರದಲ್ಲಿ ಶನಿಯ ಸಂಚಾರ ಭ್ರಾತೃಗಳಿಗೆ ಅಥವಾ ತತ್ಸಮಾನ ರಿಗೆ ಪೀಡೆಯನ್ನುಂಟು ಮಾಡುವದು.

ಮಂಗಳನ ಶೋಧ್ಯಪಿಂಡವನ್ನು ಶೋಧನಕ್ಕಿಂತ ಪೂರ್ವದಲ್ಲಿ ಮಂಗಳ ನಿಂದ ೩ ರಲ್ಲಿ ಬಿದ್ದಿರುವ ಬಿಂದುಸಂಖ್ಯೆಯಿಂದ ಗುಣಿಸಿ ೧೨ ರಿಂದ ಭಾಗಿಸಿ, ಶೇಷ ಎಷ್ಟು ಉಳಿಯುವದೋ ಅಷ್ಟನೇ ರಾಶಿಯನ್ನು ಮೇಷ-

ದಿಂದ ಎಣಿಸಬೇಕು. ಆ ರಾಶಿಗೆ ಗುರು ಬಂದಾಗ ಭ್ರಾತೃ-ಕಲ್ಯಾಣ-ವಾಗುವದು. ಆ ರಾಶಿಯ ಅಧಿಪತಿಯ ದಶಾಂತರ್ದಶೆಗಳಲ್ಲಿ ಭ್ರಾತೃ ಕಲ್ಯಾಣ ಅಥವಾ ಸೋದರಜನನ.

೧೨) ೪೫೨ (೩೭
೩೬
---
೯೨
೮೪
---
೮

ವೃಶ್ಚಿಕ ರಾಶಿ ಬರುವದು.

ವೃಶ್ಚಿಕ ರಾಶಿಯಲ್ಲಿ ಗುರುವಿನ ಸಂಚಾರ ಭ್ರಾತೃಗಳಿಗೆ ಕಲ್ಯಾಣ. ಇದರಂತೆ ಮಂಗಳನ ಮಹಾದರ್ಶೆ ಅಂತರ್ದಶೆಗಳು.

ಮಂಗಳನ ಅಷ್ಟಕವರ್ಗದಿಂದ ತಿಳಿದುಬರುವ ಕೆಲವು ಮಹತ್ವದ ಅಂಶಗಳು.

ಮಂಗಳನು ಚತುರ್ಥಾಧಿಪತಿ ಇದ್ದು, ತನ್ನ ಮನೆಯಲ್ಲಿ ಇದ್ದು ೪ ಬಿಂದುಗಳಿಂದ ಕೂಡಿದ್ದರೆ ಅವನು ರಾಜಕುಲದಲ್ಲಿ ಹುಟ್ಟಿದ್ದರೆ ೩-೪ ಕೋಟಿ ಕೊತ್ತಳಗಳ ಅಧಿಪತಿಯಾಗುವನು. ದಃಸುದಲ್ಲಿದ್ದರೆ ರಾಜನಾಗುವನು ಅಥವಾ ನ್ಯಾಯಾಧೀಶನಾಗುವನು. ಬ್ರಾಹ್ಮಣನಿದ್ದರೆ ಅನೇಕ ಯಾಗ-ಗಳನ್ನು ಮಾಡುವನು. ವೈಶ್ಯನಿದ್ದರೆ ವ್ಯಾಪಾರದಿಂದ, ಒಕ್ಕಲುತನದಿಂದ ಸಂಪತ್ತಿಯನ್ನು ಗಳಿಸುವನು. ಶೂದ್ರನಿದ್ದಲ್ಲಿ ಸೇನಾಪತಿಯಾಗುವನು. (ಇದು ಸಿಂಹ, ಮಕರ ಲಗ್ನಗಳಿಗೆ ಸಂಬಂಧಪಟ್ಟಿರುವದು.)

ಮಂಗಳನು ೪ ಬಿಂದುಗಳಿಂದ ಕೂಡಿ ಚಂದ್ರಯುಕ್ತನಾಗಿದ್ದರೆ ಅಥವಾ ಚಂದ್ರನ ದೃಷ್ಟಿಯಲ್ಲಿದ್ದರೆ ಮಾಂಡಲಿಕನಾಗುವನು. ಇಂದಿನ ಕಾಲದಲ್ಲಿ ಮಂತ್ರಿಯಾಗುವನು. ಚಂದ್ರಮಂಗಲಸಂಯೋಗೇ ನ ಗುಂಚತಿ ನ ಶ್ರೀಃ ಲಕ್ಷ್ಮೀಃ ಲಜ್ಜಾ ಕುಲವಧೂಮಿವ— ಇಂತಹ ಪದ್ಯಗಳಿಗೆ

ಚಂದ್ರ, ಮಂಗಳರಿಗೆ ೫–೬–೭–೮ ಬಿಂದುಗಳು ಬಿದ್ದಿರುವಲ್ಲಿ, ಲಾಗೂ ಮಾಡಿದಲ್ಲಿ ಶ್ಲೋಕಾರ್ಥವು ವ್ಯರ್ಥವಾಗುವದಿಲ್ಲ.

ಮಂಗಳನು ೪ ಬಿಂದುಗಳಿಂದ ಯುಕ್ತನಾಗಿ ರಾಶಿಬಲದಿಂದ ಕೂಡಿರುವಲ್ಲಿ ಶನಿಯ ಸಂಬಂಧ ಬಂದಲ್ಲಿ ರಾಜ್ಯದ ಮುಖ್ಯಸ್ಥ ಅಥವಾ ನ್ಯಾಯಾಧೀಶನಾಗುವನು.

ಮಂಗಳನು ಬಲಿಷ್ಟನಾಗಿ ಹೆಚ್ಚು ಬಿಂದುಗಳಿಂದ ಕೂಡಿದ್ದರೆ ಹಳ್ಳಿಯ ಮುಂದಾಳು ಆಗುವನು.



# ಬುಧನ ಅಷ್ಟಕವರ್ಗ

ಬುಧನ ಅಷ್ಟಕವರ್ಗದಲ್ಲಿ ಬುಧನಿಂದ ೧-೩-೫-೬-೯-೧೦-೧೧-೧೨ ರಲ್ಲಿ ಬಿಂದುಗಳನ್ನು ಇಡಬೇಕು. ಗುರುವಿನಿಂದ ೬-೮-೧೧-೧೨ ರಲ್ಲಿ ಬಿಂದುಗಳು ಬರುವವು. ಶುಕ್ರನಿಂದ ೧-೨-೩-೪-೫-೮-೯-೧೧ ರಲ್ಲಿ ಶನಿಯಿಂದ ೧-೨-೪-೭-೮-೯-೧೦-೧೧ ರಲ್ಲಿ, ಬಿಂದುಗಳು ಬರುವವು. ಲಗ್ನದಿಂದ ೧-೨-೪-೬-೮-೧೦-೧೧ ರಲ್ಲಿ ಸೂರ್ಯನಿಂದ ೫-೬-೯-೧೧-೧೨ ರಲ್ಲಿ ಬರುವವು. ಚಂದ್ರನಿಂದ ೨-೪-೬-೮-೧೦-೧೧ ರಲ್ಲಿ, ಮಂಗಳನಿಂದ ೧-೨-೪-೭-೮-೯-೧೦-೧೧ ರಲ್ಲಿ ಬಿಂದುಗಳನ್ನಿಡಬೇಕು. ಒಟ್ಟು ೫೪ ಬಿಂದುಗಳು.



ಬುಧನು ದಶಮದಲ್ಲಿರುವನು. ಅವನಿಗೆ ಮೂಲಕುಂಡಲಿಯಲ್ಲಿ $\frac{8}{8}=\frac{1}{1}$ ಬಲವಿದ್ದಂತಾಯಿತು.

ಬುಧನು ೮ ಬಿಂದುಗಳಿಂದ ಕೂಡಿದ್ದರೆ ರಾಜ ಅಥವಾ ರಾಜ ಸಮಾನ. ೭ ಬಿಂದುಗಳಿದ್ದರೆ ಸಂಪತ್ತು, ಸುಖ, ಬೌದ್ಧಿಕ ಕಾರ್ಯಗಳಲ್ಲಿ ಯಶಸ್ಸು. ೬ ಬಿಂದುಗಳಿಂದ ಕೂಡಿದ್ದರೆ ಕೈಕೊಂಡ ಕಾರ್ಯಗಳಲ್ಲಿ ಯಶಸ್ಸು. ಉದಾಹೃತ ಕುಂಡಲಿಯಲ್ಲಿ ಬುಧನು ೬ ಬಿಂದುಗಳಿಂದ ಕೂಡಿರುವನು. ಪ್ರತಿವರುಷ ಬುಧನು ಕುಂಭದಲ್ಲಿ ಸಂಚರಿಸುವಾಗ ಕಾರ್ಯಗಳಿಗೆ ಯಶಸ್ಸು ಸಿಗುವದು. ಗ್ರಾಹಕಶಕ್ತಿ ಚೆನ್ನಾಗಿರುವದು. ತೊಡಕಿನ ಪ್ರಶ್ನೆಗಳನ್ನು ಬಿಡಿಸುವ ಚಾತುರ್ಯ. ೫ ಬಿಂದುಗಳಿಂದ ಕೂಡಿದ್ದರೆ— ಹೊಸ ಮಿತ್ರರು, ಬಂಧುಗಳು ದೊರಕುವರು. ೪ ಬಿಂದುಗಳಿಂದ ಕೂಡಿದ್ದರೆ ಕಾರ್ಯಗಳಲ್ಲಿ ಉತ್ಸಾಹ ಕಡಿಮೆ. ಆದರೂ ತೃಪ್ತಿ. ೩ ಬಿಂದುಗಳಿಂದ ಕೂಡಿದ್ದರೆ ಮಾನಸಿಕ ತೊಂದರೆಗಳು. ೨ ವಾತ, ಪಿತ್ತ, ಕಫಗಳಿಂದ ಅನಾರೋಗ್ಯ. ೧ ಹಾನಿ. ಶೂನ್ಯಬಿಂದುವಿನಿಂದ ಆಸ್ತಿ, ಹಾನಿ, ಮರಣ ಭಯ, ಶತ್ರುಭಯ.

**ಬುಧಾತ್ ತುರ್ಯಂ ಕುಟುಂಬಂ ಚ ।**
**ಧನಪುತ್ರಾದಿ ಮಾತುಲಾಃ ತತ್ ಪಂಚಮೇ ।**
**ಮಂತ್ರವಿದ್ಯಾಲಿಪಿ ಬುಧ್ಯಾದಿ ಚಿಂತಯೇತ್ ॥**

ಬುಧನಿಂದ ೪ನೇ ಸ್ಥಾನದಿಂದ ಕುಟುಂಬ, ಧನ, ಪುತ್ರ, ಸೋದರಮಾವ ಇವರ ವಿಚಾರವನ್ನು ಮಾಡುವದು, ೪ನೇ ಜಾಗೆಯಲ್ಲಿ ೫ ಬಿಂದುಗಳಿರುವವು. ಇವರಿಂದ $\frac{5}{8}$ ಸುಖವು ಸಿಗುವದು.

ಬುಧನಿಂದ ಮಂತ್ರವಿದ್ಯಾ-ಬುದ್ಧ್ಯಾಧಿಗಳನ್ನು ವಿಚಾರಿಸುವರು. ಇಲ್ಲಿ ೬ ಬಿಂದುಗಳು ಇರುವವು. $\frac{6}{8}$ $\frac{3}{4}$ ಇವುಗಳಿಂದ ಹಿತವುಂಟು.

ಬುಧನ ಅಷ್ಟಕವರ್ಗದಲ್ಲಿ ಬುಧನಿಂದ ೨ನೆಯ ಠಾಣದಲ್ಲಿ ಶೂನ್ಯ

ಬಿಂದು ಇದ್ದರೆ ಅಥವಾ ೧ ಬಿಂದು ಇದ್ದರೆ ಮೂಕನಾಗುವನು. ೨ ಬಿಂದು ಬಿದ್ದಿದ್ದರೆ ಚಂಚಲವಾಕ್. ೩ ಬಿಂದುಗಳಿದ್ದರೆ ಸಾಧಾರಣ ಮಾತು. ೪ ಬಿಂದುಗಳಿಂದ ವಕ್ತಾ. ೫-೬-೭ ಉಚಿತವಾಕ್. ೭ ಬಿಂದುಗಳಿಂದ ಕವಿಯಾಗುವನು. ೮ ಬಿಂದುಗಳಿದ್ದರೆ ಬೃಹಸ್ಪತಿ. ಅವನ ಮಾತಿಗೆ ಯಾರೂ ಉತ್ತರ ಕೊಡಲಾರರು.

ಇದರಂತೆ ಲಗ್ನದಿಂದ ೨ನೆಯ ಸ್ಥಾನವನ್ನು ನೋಡಬೇಕು. ಅದು ವಾಣೀಸ್ಥಾನ. ಅಲ್ಲಿ ಶೂನ್ಯ ಬಿಂದು ಬಿದ್ದಿದ್ದರೆ ತನ್ನ ವಿಚಾರಗಳನ್ನು ಸರಿಯಾಗಿ ವ್ಯಕ್ತಪಡಿಸಲಾರನು. ಉದಾಹೃತ ಕುಂಡಲಿಯಲ್ಲಿ ಲಗ್ನದಿಂದ ದ್ವಿತೀಯದಲ್ಲಿ ೬ ಬಿಂದುಗಳಿರುವವು.

**ಔಚಿತ್ಯವತೀ ಚ ವಾಣೀ**— ಬುಧನು ಮಿಥುನ, ಕುಂಭ, ವೃಶ್ಚಿಕ, ಧನುಗಳಲ್ಲಿ ೬ ಬಿಂದುಗಳು ಬಿದ್ದಿರುವದರಿಂದ ಈ ರಾಶಿಗಳಲ್ಲಿ ಬುಧನ ಸಂಚಾರವಿದ್ದಾಗ ಸಂಭಾಷಣ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳಬೇಕು. ಇವು ಬಹ್ವಕ್ಷ ರಾಶಿಗಳು. ಇಲ್ಲಿ ಬುಧನಿರುವಾಗ ವಿದ್ಯಾಭ್ಯಾಸವು ಫಲಕಾರಿಯಾಗುವದು.

**ರಾಶಿ ಗುಣಾಕಾರ**

ಮೇಷ ೧ × ೭ = ೭
ವೃಷಭ ೩ × ೧೦ = ೩೦
ಮಿಥುನ ೨ × ೮ = ೧೬
ಕರ್ಕ ೧ × ೪ = ೪
ವೃಶ್ಚಿಕ ೨ × ೮ = ೧೬
ಧನು ೩ × ೯ = ೨೭
ಮಕರ ೨ × ೫ = ೧೦
ಕುಂಭ ೨ × ೧೧ = ೨೨

೧೩೨ ರಾಶಿಪಿಂಡ.

## ತ್ರಿಕೋಣ ಶೋಧನ



## ಏಕಾಧಿಪತ್ಯ ಶೋಧನ



ಶೋಧ್ಯಾವಶಿಷ್ಟ - ೧೬

## ಗ್ರಹ ಗುಣಾಕಾರ

ಗು. ೧ × ೧೦ = ೧೦
ಬು. ೨ × ೯ = ೧೮
ಶು. ೧ × ೭ = ೭
ಮಂ. ೧ × ೮ = ೮
——
೪೩ ಗ್ರಹಪಿಂಡ.

೧೩೨ + ೪೩ = ೧೭೫ ಶೋಧ್ಯಪಿಂಡ.

ಕೇಂದ್ರದಲ್ಲಿ ತ್ರಿಕೋಣದಲ್ಲಿ ಬುಧನು ೮ ಬಿಂದುಗಳಿಂದ ಕೂಡಿದ್ದರೆ ವಿದ್ಯಾಧಿಕ ಭೋಗಶಾಲೀ. ಉದಾಹೃತ ಕುಂಡಲಿಯಲ್ಲಿ ಬುಧನು ಕೇಂದ್ರ-ದಲ್ಲಿದ್ದು ೭ ಬಿಂದುಗಳು ಇರುವವು. ¾ ಶುಭ ಫಲ. ಬುಧನು ಉಚ್ಚ ಮೂಲ ತ್ರಿಕೋಣ ಸ್ವಕ್ಷೇತ್ರದಲ್ಲಿದ್ದರೆ ೧-೨-೩ ಬಿಂದುಗಳಿದ್ದರೂ ಭಾವ-ವೃದ್ಧಿ, ಹಾನಿಯಿಲ್ಲ.

**ಬುಧನ ಶೋಧ್ಯ ಪಿಂಡ :—**

ಅವನಿಂದ ೨ ರಲ್ಲಿ ಶೋಧನಕ್ಕಿಂತ ಪೂರ್ವದಲ್ಲಿ ಬಿದ್ದ ಬಿಂದುಗಳಿಂದ ಗುಣಿಸಬೇಕು. ೧೨ ರಿಂದ ಭಾಗಿಸಬೇಕು.

ಉದಾ :— ೧೭೫
೩
————
೧೨ ) ೫೨೫ ( ೪೩
೪೮
——
೪೫
೩೬
——
೯

೯ ಉಳಿಯುವದು. ಮೇಷದಿಂದ ೯ನೇ ರಾಶಿ ಧನು; ಇದರ ಅಧಿಪತಿ ಗುರು. ಗುರುದಶೆ ಬಂದಾಗ ವಿದ್ಯಾಕಾರ್ಯದಲ್ಲಿ ಯಶಸ್ಸು— ದೌತ್ಯಾದಿ-ಕರ್ಮಗಳು ಸಿದ್ಧಿಸುವವು. ಇಲ್ಲಿ ಗುರುವಿನ ಸಂಚಾರವೂ ಈ ಕಾರ್ಯ-ಗಳಿಗೆ ಅನುಕೂಲ.

೧೯೬೦ನೇ ಇಸವಿಯಲ್ಲಿ ಗುರುವಿನ ಸಂಚಾರವು ಧನೂದಲ್ಲಿತ್ತು.

ಬುಧನ ಶೋಧ್ಯಪಿಂಡವನ್ನು ಶೋಧನಕ್ಕಿಂತ ಪೂರ್ವದಲ್ಲಿ ಬುಧನಿಂದ ೪ ರಲ್ಲಿ ಬಿದ್ದ ಬಿಂದುಗಳಿಂದ ಗುಣಿಸಬೇಕು. ೨೭ ರಿಂದ ಭಾಗಿಸಬೇಕು. ಶೇಷನಕ್ಷತ್ರದಲ್ಲಿ ಶನಿ ಬಂದಾಗ ಬಂಧುಪೀಡೆ.

ಉದಾ :—

```
        ೧೭೫
          ೫
    ---------
೨೭ ) ೮೭೫ ( ೩೨
     ೮೧
     ---
      ೬೫
      ೫೪
      ---
      ೧೧
```

೧೧ನೆಯ ನಕ್ಷತ್ರ ಪೂರ್ವಾ, ಪೂರ್ವಾದಲ್ಲಿ ಶನಿಯ ಸಂಚಾರ ಬಂಧು ಪೀಡಾ; ಮಿತ್ರರಿಗೆ ಕಾಟ. ೧೯೭೦ ರಲ್ಲಿ ಭರಣಿ. ತ್ರಿಕೋಣ ನಕ್ಷತ್ರದಲ್ಲಿ ಸಂಚರಿಸಿದನು.

ಬುಧನ ಶೋಧ್ಯಪಿಂಡ. ಉದಾ:— ೧೭೫
ಅವನಿಂದ ೧೦ ರಲ್ಲಿ ಬಿದ್ದ ಬಿಂದುಗಳು. ೬
ಅವುಗಳಿಂದ ಗುಣಿಸಿ ೨೭ ರಿಂದ ಭಾಗಿಸಬೇಕು. ———
೧೦೫೦

೨೭ ) ೧೦೬೦ ( ೩೯
೮೧
——
೨೫೦
೨೪೩
——
೧೭

೧೭ ನೆಯ ನಕ್ಷತ್ರ ಅನುರಾಧಾ. ಅನುರಾಧಾ ನಕ್ಷತ್ರದಲ್ಲಿ ಶನಿಯು ಸಂಚಾರ ಕಾರ್ಯಗಳಿಗೆ ತೊಂದರೆಗಳನ್ನುಂಟು ಮಾಡುವನು.

೧೯೫೬ ರಲ್ಲಿ ಶನಿಯ ಸಂಚಾರ ಅನುರಾಧಾದಲ್ಲಿ ಇತ್ತು.

ಬುಧನ ಅಷ್ಟಕ ವರ್ಗವನ್ನು ಪರೀಕ್ಷಿಸುವಾಗ ಕೆಲವು ಉಪಯುಕ್ತ ನಿಯಮಗಳು: ಕುಂಡಲಿಯಲ್ಲಿ ಬುಧನು ೬–೮–೧೨ ರಲ್ಲಿದ್ದು ೧–೨–೩ ಬಿಂದುಗಳಿಂದ ಕೂಡಿದ್ದರೆ ಶುಭಗ್ರಹದ ದೃಷ್ಟಿಪಾತವಿಲ್ಲದಿದ್ದರೆ ಜೂಜು ಆಡುವನು, ನೀಚ ಮನಸ್ಸಿನವನು ಆಗುವನು. ಬುಧನಿಗೆ ೫ ಕ್ಕಿಂತ ಹೆಚ್ಚು ಬಿಂದುಗಳಿದ್ದು, ತ್ರಿಕೋಣದಲ್ಲಿದ್ದು, ಗುರು ಅಥವಾ ಶನಿಯ ದೃಷ್ಟಿಯಲ್ಲಿದ್ದರೆ ತತ್ವಜ್ಞಾನಿಯೂ ವೇದಾಂತಿಯೂ ಆಗುವನು. ಶನಿ, ಗುರು ಇವರು ವೇದಾಂತವನ್ನು ಕಲಿಸುವ ಗ್ರಹಗಳು.

ಬುಧನಿಗೆ ೫ ಬಿಂದುಗಳಿದ್ದು ಗುರು–ಮಂಗಳರ ಯುತಿಯಲ್ಲಿದ್ದರೆ ೫ ಬಿಂದುಗಳಿಂದ ಕೂಡಿದ ಬುಧನು ಗುರುವಿನ ಯುತಿಯುದ್ದು ಮಂಗಳನ ದೃಷ್ಟಿಯಿದ್ದರೆ ತರ್ಕಶಾಸ್ತ್ರಜ್ಞನೂ ಕಾಯದೆಪಂಡಿತನೂ ಆಗುವನು.

ಲಗ್ನದಿಂದ ಪಂಚಮಭಾವದಲ್ಲಿ ಬುಧನಿದ್ದು, ಹೆಚ್ಚು ಬಿಂದುಗಳಿದ್ದು ಕೇತುವಿನಿಂದ ಕೂಡಿದ್ದರೆ ಜ್ಯೋತಿಷ್ಯದಲ್ಲಿ, ಫಲಿತದಲ್ಲಿ, ಗಣಿತದಲ್ಲಿ ಪ್ರವೀಣನಾಗುವನು. ( ಬುಧಹರ್ಷಲ ತ್ರಿಕೋಣವು ಜ್ಯೋತಿಶ್ಯಾಸ್ತ್ರವನ್ನು ಹುಟ್ಟಿಸುವದು. ಹರ್ಷಲನು ಜ್ಯೋತಿಷಕಾರಕನೆಂದು ಸಾಯನವಾದಿಗಳ ಮತವಿರುವುದು. ಆದರೆ ಶನಿಗೆ ಇವರ ಕಾರಕತ್ವವನ್ನು ಕಾರ್ಟರರು ಕೊಟ್ಟಿರುವರು. )

ಬುಧನು ತನ್ನ ಮನೆಯಲ್ಲಿ ತನ್ನ ನವಾಂಶದಲ್ಲಿದ್ದರೆ ಶಿಲ್ಪಕಲೆ, ವೇದಾಂತ, ಲಲಿತಕಲೆಗಳು, ಶಸ್ತ್ರಗಳಲ್ಲಿ ಪ್ರಾವಿಣ್ಯ ಕೊಡುವನು. ಬುಧನು ಶನಿ, ಶುಕ್ರ, ಚಂದ್ರರ ಸಹವಾಸದಲ್ಲಿದ್ದರೆ, ಗುರುವಿನ ದೃಷ್ಟಿಯಲ್ಲಿದ್ದರೆ ನರ್ತನ, ಹಾಸ್ಯ, ವಿದೂಷಕತ್ವಗಳಲ್ಲಿ ಪ್ರವೀಣತೆ. ಬುಧನು ೪ ಬಿಂದುಗಳೊಡನೆ ಇದ್ದು, ಮಂಗಳನ ಮನೆಯಲ್ಲಿ ಇಲ್ಲವೆ, ಶುಕ್ರನ ನವಾಂಶದಲ್ಲಿ ಗುರುವಿನ ದೃಷ್ಟಿಯಲ್ಲಿದ್ದರೆ ಕವಿಯೂ ನಾಟಕಕಾರನೂ ಆಗುವನು.

ಬುಧನು ಹೆಚ್ಚು ಬಿಂದುಗಳಿಂದ ಕೂಡಿದ್ದರೆ ಅವನ ದೌರ್ಬಲ್ಯವು ಅಡಗುವದು. ಯಾವ ಭಾವದಲ್ಲಿ ಬುಧನಿರುವನೋ ಆ ಭಾವಾಧಿಪತಿ ಲಗ್ನದಿಂದ ೬-೮-೧೨ ರಲ್ಲಿದ್ದರೆ ಅವನ ಶಿಕ್ಷಣದಲ್ಲಿ ಅನೇಕ ಎಡರುಗಳು ಬರುವವು. ಬುಧನು ಉಚ್ಚ ಸ್ವಕ್ಷೇತ್ರದಲ್ಲಿದ್ದರೂ ೧-೩ ಬಿಂದುಗಳಿಂದ ಕೂಡಿದ್ದರೆ ಆ ಭಾವವು ಅಭಿವೃದ್ಧಿಯನ್ನು ಪಡೆಯಲಾರದು.

ಬುಧನು ಭಾವದಲ್ಲಿ ದುರ್ಬಲನಾಗಿದ್ದರೂ ೪ ಅಥವಾ ನಾಲ್ಕಕ್ಕಿಂತ ಹೆಚ್ಚು ಬಿಂದುಗಳಿದ್ದರೆ ಆ ಭಾವವು ಏಳಿಗೆಯನ್ನು ಪಡೆಯುವದು. ಬುಧನಿದ್ದ ಭಾವಾಧಿಪತಿ ಬುಧನ ಅಷ್ಟಕವರ್ಗದಲ್ಲಿ ೪ ಬಿಂದುಗಳಿಂದ ಕೂಡಿ, ಲಗ್ನದಿಂದ ಕೇಂದ್ರ ತ್ರಿಕೋಣದಲ್ಲಿದ್ದರೆ ಶುಭ ಗ್ರಹದ ದೃಷ್ಟಿಯಿದ್ದರೆ ಅವನ ವಿದ್ಯೆಬುದ್ಧಿಗಳು ಬೆಳವಣಿಗೆಯನ್ನು ಹೊಂದುವವು.

| | |
|---|---|
| ಬುಧನ ಶೋಧ್ಯಪಿಂಡ. | ೧೬೫ |
| ಬುಧನಿಂದ ೨ ರಲ್ಲಿ ಬಿದ್ದ ಬಿಂದು | ೩ |
| | ೧೨ ) ೫೨೫ ( ೪೩ |
| | ೪೮ |
| | ೪೫ |
| | ೩೬ |
| ೯ನೇ ರಾಶಿ ಧನು | ೯ |

ಧನೂದಲ್ಲಿ ಗುರುವಿನ ಸಂಚಾರ ೧೯೬೦ನೇ ಇಸವಿಯಲ್ಲಿ ಆಗಿತ್ತು. ಬುಧನು ಕಾರಕನಾಗಿದ್ದ ವಿದ್ಯಾ, ಪೌತ್ರ್ಯಾದಿಕಾರ್ಯಗಳಲ್ಲಿ ಆಗ ಯಶಸ್ಸು.

ಆಧಾರ ಶ್ಲೋಕ.

ಸ್ವಾರ್ಥಸ್ಥಿತಾಕ್ಷ ನಿಹತೇ ಬುಧಶುದ್ಧಪಿಂಡೇ ।
ರನ್ಯಾ ಹೃತೇಽಜಮುಖರಾಶಯ ಏವಶಿಷ್ಟಾಃ
ತೇಷ್ವಂತ್ಯ ಭಾಧಿಪದಶಾ ಚ ತಥಾಪಹಾರೋ
ವಿದ್ಯಾಧಿಗಮಾಯ ಧಿಷಣಸ್ಯ ಹಿ ತತ್ರಚಾರಃ ॥
ದೌತ್ಯಾದೀನಾಂ ಬುಧೋ ಯೇಷಾಂ ಕಾರಕಃ
ಪರಿಕೀರ್ತಿತಃ ।
ಸಿದ್ಧಿಸ್ತೇಷಾಂ ಚ ಸರ್ವೇಷಾಂ ತತ್ರಾನೇಹಸಿ ಕಥ್ಯತಾಂ ।

ಬುಧನು ಕರ್ಮ ಭಾವದಲ್ಲಿ ೬ ಬಿಂದುಗಳಿಂದ ಕೂಡಿರುವನು. ಇದು ಕರ್ಮ ಭಾವಕ್ಕೆ ಪುಷ್ಟಿಯನ್ನು ಕೊಟ್ಟಿರುವದೆಂದು ದೇವಕೇರಲವು ಹೇಳುವುದು. ಬುಧನ ಅಂತರ್ದಶೆ ಬಿ. ವ್ಹಿ. ರಾಮನ್ನರ ಅಯನಾಂಶದಂತೆ ೧೨೫೫ ಮಾರ್ಚ ೧೪ನೇ ದಿನಾಂಕ ಪ್ರಾರಂಭವಾಗಿತ್ತು. ೧೯೬೧ ಆಕ್ಟೋಬರ ೨ನೇ ದಿನಾಂಕದ ವರೆಗೆ ಇತ್ತು. ಕಾರ್ಯದಲ್ಲಿ ಗೌರವ, ಮಾನಾರ್ಹತೆ ಮೊದಲಾದ ಫಲಗಳು, ಸುಕ್ಕಳ ಉತ್ಕರ್ಷ.

ಬುಧನ ಅಷ್ಟಕವರ್ಗದಲ್ಲಿ ೪ ಕ್ಕಿಂತ ಹೆಚ್ಚು ಬಿಂದುಗಳು ಬಿದ್ದ ರಾಶಿಯನ್ನು ಗಮನಿಸಿರಿ. ಈ ರಾಶಿಯಲ್ಲಿ ಶುಭಗ್ರಹದ ದೃಷ್ಟಿಬಿದ್ದ ರಾಶಿಯನ್ನು ಗಮನಿಸಿರಿ. ಈ ರಾಶಿಯಲ್ಲಿ ವಿದ್ಯಾರಂಭದ ಕಾರ್ಯವನ್ನಾಗಲಿ, ವಿದ್ಯಾಪ್ರಸಾರದ ಕಾರ್ಯವನ್ನಾಗಲಿ ಆರಂಭಿಸಿದಲ್ಲಿ ಯಶಸ್ಸು ಸಿಗುವದು.

ಉದಾಹೃತ ಕುಂಡಲಿಯಲ್ಲಿ ಮಿಥುನ, ವೃಶ್ಚಿಕ, ಧನೂಗಳಲ್ಲಿ ೬ ಬಿಂದುಗಳಿರುವವು. ಇವುಗಳಲ್ಲಿ ವೃಶ್ಚಿಕದಲ್ಲಿ ಮಾತ್ರ ಉಚ್ಚವಿರುವ ಗುರುವಿನ ಪೂರ್ಣದೃಷ್ಟಿ ಇರುವದು. ಕಾರಣ ವೃಶ್ಚಿಕರಾಶಿಯಲ್ಲಿ ಬುಧನ ಸಂಚಾರವಿರುವಾಗ ವಿದ್ಯೆಯ ಸಂಬಂಧದ ಕಾರ್ಯಗಳನ್ನು ಮಾಡಬೇಕು.

# ಗುರುವಿನ ಅಷ್ಟಕವರ್ಗ

ಗುರುವಿನಿಂದ ೧-೨-೩-೪-೭-೮-೧೦-೧೧ ರಲ್ಲಿ ಬಿಂದುಗಳು

ಶುಕ್ರನಿಂದ ೨-೫-೬-೯-೧೦-೧೧ ರಲ್ಲಿ ,,

ಶನಿಯಿಂದ ೩-೫-೬-೧೨ ರಲ್ಲಿ ,,

ಲಗ್ನದಿಂದ ೧-೨-೪-೫-೬-೭-೯-೧೦-೧೧ ರಲ್ಲಿ ,,

ರವಿಯಿಂದ ೧-೨-೩-೪-೭-೮-೯-೧೦-೧೧ ರಲ್ಲಿ ,,

## ಗುರುವಿನ ಅಷ್ಟಕವರ್ಗ



ಚಂದ್ರನಿಂದ ೩-೫-೭-೯-೧೧ ರಲ್ಲಿ ಬಿಂದುಗಳು.
ಮಂಗಳನಿಂದ ೧-೨-೪-೭-೮-೧೦-೧೧ ರಲ್ಲಿ ,,
ಬುಧನಿಂದ ೧-೨-೪-೫-೬-೯-೧೦ ೧೧ ರಲ್ಲಿ ,,
ಈ ಪ್ರಕಾರ ಬಿಂದುಗಳನ್ನಿಡಬೇಕು. ಒಟ್ಟು ೫೬ ,,

## ತ್ರಿಕೋಣ ಶೋಧನ




## ರಾಶಿ ಗುಣಾಕಾರ:

ವೃಷಭ ೧ × ೧೦ = ೧೦
ಕರ್ಕ ೧ × ೪ = ೪
ವೃಶ್ಚಿಕ ೧ × ೮ = ೮
ಕುಂಭ ೩ × ೧೧ = ೩೩

೫೫ ರಾಶಿಪಿಂಡ.

## ಏಕಾಧಿಪತ್ಯ ಶೋಧನ.




ಶೋಧ್ಯಾವಶಿಷ್ಟ ೬.

### ಗ್ರಹ ಪಿಂಡ

ಗುರು ೧ × ೧೦ = ೧೦

ಬುಧ ೩ × ೫ = ೧೫

———

೨೫ ಗ್ರಹಪಿಂಡ

೩೫ + ೨೫ = ೬೦ ಶೋಧ್ಯಪಿಂಡ.

ಗುರು ತನ್ನ ಅಷ್ಟಕವರ್ಗದಲ್ಲಿ ಶೋಧನಕ್ಕಿಂತ ಪೂರ್ವದಲ್ಲಿ ೬ ಬಿಂದುಗಳಿಂದ ಕೂಡಿದ್ದರೆ ರಾಜ, ರಾಜಸಮಾನ.

೭ ಬಿಂದುಗಳಿಂದ ವಿವಿಧ ರೀತಿಯಿಂದ ಧನಪ್ರಾಪ್ತಿ, ಸುಖ.

೬ " ಒಳ್ಳೆ ಉಡುಪುಗಳು, ವಾಹನ, ಸುವರ್ಣಪ್ರಾಪ್ತಿ.

೫ " ಶತ್ರುವಿನಾಶ. ಕೈಕೊಂಡ ಕಾರ್ಯಗಳಲ್ಲಿ ಯಶಸ್ಸು.

೪ " ಹಾನಿಯೂ ಇಲ್ಲ. ಲಾಭವೂ ಇಲ್ಲ.

೩ " ಕರ್ಣವೇದನೆ ಚೈತನ್ಯನ್ಯೂನತೆ.

೨ " ರಾಜಕೋಪ ಭೂಮಿನಾಶ,

೧ " ಧನಹಾನಿ, ಬಂಧುಹಾನಿ, ಶತ್ರುಪೀಡೆ.

೦ " ಬುದ್ಧಿ, ಧನ, ಸುತ — ಹಾನಿ.

ಕುಂಭ, ವೃಷಭ ರಾಶಿಗಳಲ್ಲಿ ಹೆಚ್ಚು ಬಿಂದುಗಳು ಬಿದ್ದಿವೆ. ಆ ರಾಶಿಗಳಲ್ಲಿ ಗುರುವಿನ ಸಂಚಾರವಿದ್ದಾಗ ಮಂತ್ರಗ್ರಹಣ ಪುರಶ್ಚರಣ ಅಗ್ನ್ಯಾಧಾನ ಯಾಗಾದಿಗಳನ್ನು ಮಾಡಬೇಕು. ವೇದಾಭ್ಯಾಸ, ಬ್ರಾಹ್ಮಣರ ಭೋಜನ, ಸಂತಾನಪ್ರಾಪ್ತಿಗೆ ಮಾಡಬೇಕಾದ ಹೋಮಹವನಾದಿಗಳು ಸಂತಾನ ಗೋಪಾಲವ್ರತ ಮಾಡಿದಲ್ಲಿ ಫಲಪ್ರದವಾಗುವವು.

ತುಲಾ, ಮಕರಗಳಲ್ಲಿ ೫ ಬಿಂದುಗಳಿರುವವು. ಆಗ ಮಹತ್ವದ ಧಾರ್ಮಿಕ ಕಾರ್ಯಗಳನ್ನು ಮಾಡಬೇಕು. ಉಳಿದ ರಾಶಿಗಳಲ್ಲಿ ಸಾಮಾನ್ಯ-ಫಲ.

೧೯೬೨ ರಲ್ಲಿ ಗುರು, ಕುಂಭ ರಾಶಿಯಲ್ಲಿ ಸಂಚರಿಸಿದ. ಕರ್ಮ-ಭಾವಕ್ಕೆ ಪುಷ್ಟಿ ಬಂತು.

ಗುರು ಉಚ್ಚ; ಅಥವಾ ಸ್ವಕ್ಷೇತ್ರದಲ್ಲಿ ೮ ಬಿಂದುಗಳಿಂದ ಕೂಡಿದ್ದರೆ ಕೇಂದ್ರದಲ್ಲಿ ಅಥವಾ ಭಾಗ್ಯದಲ್ಲಿದ್ದರೆ, ಮಹತ್ವದ ರಾಜಯೋಗ, ಕೀರ್ತಿ ಗೌರವ, ಸ್ವಕುಲ - ಶ್ರೇಷ್ಠರಾಗುವರು.

೭; ಬಿಂದುಗಳಿಂದ ಕೂಡಿ ಚಂದ್ರಯುಕ್ತನಾಗಿದ್ದರೆ "ಬಹು ಸ್ತ್ರೀಧನ ಪುತ್ರವಂತಃ", ೬ ಬಿಂದುಗಳಿದ್ದರೆ, "ವಾಹನವಿತ್ತವಂತಃ" ೫ ಬಿಂದುಗಳಿದ್ದರೆ ಜಯಶೀಲರಾಗುವರು. ಉಚ್ಚಸ್ವಕ್ಷೇತ್ರದಲ್ಲಿರುವದು, ಕೇಂದ್ರಕೋನದಲ್ಲಿ-

ಡುವದು 'ಅಧಿಕಸ್ಯಾಧಿಕಂ ಫಲಂ.' ಗುರುವಿನಿಂದ ೨೭ ರಲ್ಲಿ ಬಿದ್ದ ಸಂಖ್ಯೆ-ಯಿಂದ ಗುಣಿತಸಂಖ್ಯೆಯನ್ನು ಹೇಳುವರು. ಉಚ್ಚನಿದ್ದರೆ ೩ - ಪಟ್ಟು ಸ್ವಕ್ಷೇತ್ರದಲ್ಲಿದ್ದರೆ ೨ ಪಟ್ಟು, ವೈರಿ-ನೀಚ ಗ್ರಹಗಳಿಂದ ಬಿಂದು ಬಿದ್ದಿದ್ದರೆ ಅವನ್ನು ಕಳೆಯುವರು. ಗುರುವಿಗೆ ೫೬ ಬಿಂದುಗಳು ಸಮುದಾಯಾಷ್ಟಕ ವರ್ಗದಲ್ಲಿದುವವು. ೫೬ ವರ್ಷಕ್ಕೆ ರಾಜಸಭೆಯ ಸದಸ್ಯರಾದರು.

ಉದಾ :— ಗುರುವಿನ ಶೋಧ್ಯಪಿಂಡ ೮೦
ಗುರುವಿನಿಂದ ೨೭ ರಲ್ಲಿ ಬಿದ್ದ ಬಿಂದುಗಳು. × ೪

೨೭ ) ೩೨೦ ( ೧೧
೨೭
೫೦
೨೭
೨೩

೨೩ ನೆಯ ನಕ್ಷತ್ರ ಧನಿಷ್ಠಾ. ಈ ನಕ್ಷತ್ರದಲ್ಲಿ ಗುರುವಿನ ಸಂಚಾರ ಸಂತಾನಜನಕವಾಗುವದು.

ಉದಾ :— ಗುರುವಿನ ಶೋಧ್ಯಪಿಂಡವನ್ನು ೭ ರಿಂದ ಗುಣಿಸಬೇಕು. ೮೦ × ೭ = ೫೬೦. ೨೭ ರಿಂದ ಭಾಗಿಸಬೇಕು ಉಳಿದ ಸಂಖ್ಯೆ ಮಕ್ಕಳ ಗುರುಗತ ನಕ್ಷತ್ರವನ್ನು ತೋರಿಸುವದು.

೨೭ ) ೫೬೦ ( ೨೦
೫೪
೨೦ ೨೦ ನೆಯ ನಕ್ಷತ್ರ ಪೂರ್ವಾಷಾಢಾ.

ಶೋಧ್ಯಪಿಂಡಕ್ಕೆ ೪ ರಿಂದ ಗುಣಿಸಿ ೧೨ ರಿಂದ ಭಾಗಿಸಬೇಕು.

ಉದಾ :—

```
       ೮೦
      × ४
   ─────────
೧೨) ३२೦ (೨೬
     ೨४
    ───
     ೮೦
     ೭೨
    ───
      ೮
```

ಉಳಿದ ರಾಶಿಯಲ್ಲಿ ರವಿಯ ಸಂಚಾರ ಸಂತಾನಜನಕ. ವೃಶ್ಚಿಕ ರವಿ ಇರುವನು. ತ್ರಿಕೋಣರಾಶಿ ಕರ್ಕ ರವಿಯಲ್ಲಿ ಒಬ್ಬ ಮಗನು ಹುಟ್ಟಿರುವನು.

ಗುರುವಿನ ಅಷ್ಟಕವರ್ಗವನ್ನು ನೋಡುವಾಗ ಕೆಲವು ಉಪಯುಕ್ತ ನಿಯಮಗಳು :

ಗುರುವಿಗೆ ೧-೩ ಬಿಂದುಗಳಿದ್ದು, ಯಾವ ಭಾವದಲ್ಲಿರುವನೋ ಆ ಭಾವವು ಅಭಿವೃದ್ಧಿ ಪಡೆಯಲಾರದು.

ಗುರುವಿನ ಅಷ್ಟಕವರ್ಗದಲ್ಲಿ ಹೆಚ್ಚು ಬಿಂದುಗಳಿರುವ ರಾಶಿಯಲ್ಲಿ ಶನಿಯು ಸಂಚರಿಸುವಾಗ ಗರ್ಭಧಾರಣೆಯುಂಟಾದರೆ ಹುಟ್ಟುವ ಮಗು ಸದ್ಗುಣಿಯಾಗುವದು.

ಚಂದ್ರನು ತನ್ನ ಅಷ್ಟಕವರ್ಗದಲ್ಲಿ ೧-೩ ಬಿಂದುಗಳಿಂದ ಕೂಡಿದ್ದು ಗುರುವಿನಿಂದ ೬-೮ ರಲ್ಲಿದ್ದರೆ ಅವನಿಗೆ ರಾಜಯೋಗವಿದ್ದರೂ ಋಣಬಾಧೆ ತಪ್ಪಲಾರದು.

ಗುರು ಯಾವ ರಾಶಿಯಲ್ಲಿದ್ದರೂ ಉಚ್ಚ ನವಾಂಶದಲ್ಲಿದ್ದರೆ, ೫ ಬಿಂದುಗಳಿಂದ ಕೂಡಿದ್ದರೆ ಸಂಪತ್ತು, ಭೂಮಿ, ಸೀಮೆಗಳ ಪ್ರಾಪ್ತಿಯಾಗುವನು.

ಅವನು ಕೇಂದ್ರ ತ್ರಿಕೋಣದಲ್ಲಿದ್ದರೂ ೧-೩ ಬಿಂದುಗಳಿಂದ ಕೂಡಿದ್ದರೆ ಫಲವಿಲ್ಲ.

ಗುರುವಿಗೆ ೪ ಕ್ಕಿಂತ ಹೆಚ್ಚು ಬಿಂದುಗಳಿದ್ದು ಗುರು-ಶುಕ್ರರು ಪರಸ್ಪರ ದೃಷ್ಟಿಯಲ್ಲಿ ಅಥವಾ ಯುತಿಯಲ್ಲಿದ್ದರೆ ರಾಜಯೋಗ.

ಗುರುವಿನ ಅಷ್ಟಕವರ್ಗದಿಂದ ಮಕ್ಕಳು ಹುಟ್ಟುವ ಗೋಚಾರಗಳೂ ಲಗ್ನಗಳೂ ತಿಳಿಯುವವು.

ಉದಾಹರಣೆಗಾಗಿ ಇದೊಂದು ಕುಂಡಲಿ.

## ಜನ್ಮ ಕುಂಡಲಿ



## ಗುರುವಿನ ಅಷ್ಟಕವರ್ಗದಲ್ಲಿ ಬಿದ್ದ ಬಿಂದುಗಳು.



ಇಲ್ಲಿ ಗುರು ಭಾಗ್ಯಭಾವದಲ್ಲಿದ್ದು ೫ ಬಿಂದುಗಳಿಂದ ಕೂಡಿರುವನು. ಅವನಿಗೆ ೫ ಬಲವಿರುವದು. ಇಲ್ಲಿ ಅಷ್ಟಕವರ್ಗದ ಕರ್ಮಕಾಂಡದ ವಿಧಿಗಳನ್ನೆಲ್ಲ ತ್ರಿಕೋಣ-ಶೋಧನಾದಿಗಳನ್ನೆಲ್ಲ ಮಾಡಿದ ಬಳಿಕ ೧೬೭ ಶೋಧ್ಯಪಿಂಡ ಬರುವದು.

**ನೇದಾಹತೇ ತ್ರಿದಶ ಪೂಜಿತ ಶುದ್ಧಪಿಂಡೇ ।**
**ರವ್ಯಾಹೃತೇಜನುಷಿ ರಾಶಿಗಣೋಽಙ ವಶಿಷ್ಟಃ ।**
**ಶೇಷ್ಯಂತ್ಯರಾಶಿಮುಪಯಾತಿ ಯದಾವಿವಸ್ವಾನ್ ।**
**ಯೂ ನೇತ್ರ ಪುತ್ರಜನನಂ ಪ್ರವದೇನ್ನರಾಣಾಂ ॥**

ಗುರುವಿನ ಶೋಧ್ಯಪಿಂಡಕ್ಕೆ ನಾಲ್ಕರಿಂದ ಗುಣಿಸಿ, ೧೨ ರಿಂದ

ಭಾಗಿಸಬೇಕು. ಮೇಷದಿಂದ ಎಣಿಸಬೇಕು. ಆ ಸೌರಮಾಸದಲ್ಲಿ ಪುತ್ರ-ಜನನವಾಗುವದು.

```
      ೧೬೭        ವೃಶ್ಚಿಕ ಮಾಸ ಬರುವದು. ಇದರ ತ್ರಿಕೋಣ
     × ೪         ಮಾಸ ಕರ್ಕ, ಮೀನ.
   ------
೧೨ ) ೬೬೮ ( ೫೫     ವೃಶ್ಚಿಕ, ಕರ್ಕ, ರವಿ ಇರುವಾಗ ಸಂತಾನ
     ೬೦          ಜನನವಾಗಿರುವದು. — (ಅನುಭವ.)
     ---
      ೬೮
      ೬೦
     ---
      ೦೮
```

**ಶುದ್ಧಪಿಂಡಂ ಗುರೋರ್ಹತ್ವಾ ನವಭಿಃ ಭಾಜಯೇತ್**
**ಪ್ರಿಯೈಃ ।**
**ಮೇಷಾದಿ ಗಣಯೇತ್ ಶಿಷ್ಟಂ ಲಗ್ನಸಿದ್ಧ್ಯೇನ ಸುತೋದ್ಭವೇ ।**

ಗುರುವಿನ ಶೋಧ್ಯಪಿಂಡವನ್ನು ೯ ರಿಂದ ಗುಣಿಸಿ ೧೨ ರಿಂದ ಭಾಗಿಸಬೇಕು. ಮೇಷದಿಂದ ಎಣಿಸಿದಲ್ಲಿ ಆ ಲಗ್ನದಲ್ಲಿ ಮಕ್ಕಳು ಹುಟ್ಟುವರು.

**ಶೋಧ್ಯಪಿಂಡ** ೧೬೭×೯=೧೫೦೩

```
೧೨ ) ೧೫೦೩ ( ೧೨೫
     ೧೨
     ---
      ೩೦
      ೨೪
     ---
       ೬೩
       ೬೦
      ---
        ೩
```

೩ ಅಂದರೆ ಮಿಥುನ. ಮಿಥುನ ತ್ರಿಕೋಣ ರಾಶಿ. ಮಿಥುನ, ಕುಂಭ ಲಗ್ನಗಳಲ್ಲಿ ಮಕ್ಕಳು ಹುಟ್ಟಿದ್ದಾರೆ.

ಶೋಧ್ಯಾವಶಿಷ್ಟಕ್ಕೆ ೧೨ ರಿಂದ ಭಾಗಿಸಿ ಉಳಿಯುವ ರಾಶಿಯಲ್ಲಿ ರವಿ ಇರುವಾಗಲೂ ಮಕ್ಕಳು ಹುಟ್ಟುವರು. ಇಲ್ಲಿ ಶೋಧ್ಯಾವಶಿಷ್ಟ ೧೫ ಇರುವದು. ಇದಕ್ಕೆ ೧೨ ರಿಂದ ಭಾಗಿಸಲಾಗಿ ೩ ಉಳಿಯುವದು. ಮಿಥುನ-ರವಿ ಇರುವಾಗಲೂ ಸಂತಾನಜನನವಾಗಿದೆ.

**ನಿಜಸುತ ಪತಿತಾಕ್ಷಹತೇ ಸುಖಭಕ್ತೇ ದೇವಪೂಜ್ಯ ಗುಣಪಿಂಡೇ**
**ಶಿಷ್ಟಂ ದಸ್ರಾದ್ಯಂ ಯತ್ತದುಡುಸ್ಥೇ ಪುತ್ರಜನ್ಮ ವಿಬುಧಗುರೌ**

ಗುರುವಿನಿಂದ ೫ ರಲ್ಲಿ ಬಿದ್ದ ಬಿಂದುಗಳಿಂದ ಗುರುವಿನ ಶೋಧ್ಯಪಿಂಡಕ್ಕೆ ಗುಣಿಸಿ ೨೭ ರಿಂದ ಭಾಗಿಸಬೇಕು. ಉಳಿಯುವ ಸಂಖ್ಯೆಯ ವರೆಗೆ ಅಶ್ವಿನಿ-ಯಿಂದ ಎಣಿಸಲಾಗಿ, ಆ ನಕ್ಷತ್ರದಲ್ಲಿ ಗುರುವಿನ ಸಂಚಾರವಿದ್ದಾಗ ಮಕ್ಕಳು ಹುಟ್ಟುವರು. ಅನೇಕ ಕುಂಡಲಿಗಳನ್ನು ಪರೀಕ್ಷಿಸಿ ನೋಡಿರಿ.

# ಶುಕ್ರನ ಅಷ್ಟಕವರ್ಗ

ಶುಕ್ರನಿಂದ—೧-೨-೩-೪-೫-೮-೯-೧೦-೧೧ ರಲ್ಲಿ ಬಿಂದುಗಳು.

ಶನಿಯಿಂದ—೩-೪-೫-೮-೯-೧೦-೧೧ ರಲ್ಲಿ.

ಲಗ್ನದಿಂದ—೧-೨-೩-೪-೫-೮-೯-೧೧ ರಲ್ಲಿ.

ಸೂರ್ಯನಿಂದ—೮-೧೧-೧೨ ರಲ್ಲಿ



ಶುಕ್ರನ ಅಷ್ಟಕವರ್ಗದಲ್ಲಿ ಪ್ರತಿಯೊಂದು ಭಾವದಲ್ಲಿ ಬಿದ್ದ ಬಿಂದುಗಳು

ಚಂದ್ರನಿಂದ—೧-೨-೩-೪-೫-೮-೯-೧೧-೧೨ ರಲ್ಲಿ.

ಮಂಗಳನಿಂದ—೩-೫-೬-೯-೧೧-೧೨ ರಲ್ಲಿ.

ಬುಧನಿಂದ—೩-೫-೬-೯-೧೧ ರಲ್ಲಿ.

ಗುರುವಿನಿಂದ—೫-೮-೯-೧೦-೧೧ ರಲ್ಲಿ ಬಿಂದುಗಳನ್ನು ಇಕ್ಕಬೇಕು.

ಒಟ್ಟು ೫೨ ಬಿಂದುಗಳಾಗುವವು.

## ತ್ರಿಕೋಣ ಶೋಧನ



## ಏಕಾಧಿಪತ್ಯ ಶೋಧನ




ಶೋಧ್ಯಾವಶಿಷ್ಟ ೧೦

| ರಾಶಿಗುಣಾಕಾರ | ಗ್ರಹಗುಣಾಕಾರ |
|---|---|
| ವೃಷಭ ೧×೧೦=೧೦ | ಮಂಗಳ ೧× ೮= ೮ |
| ಮಿಥುನ ೨× ೮=೧೬ | ಶುಕ್ರ ೧× ೭= ೭ |
| ಕರ್ಕ ೨× ೪= ೮ | ಗುರು ೨×೧೦=೨೦ |
| ಧನು ೩× ೯=೨೭ | —— |
| ಮಕರ ೧× ೫= ೫ | ಗ್ರಹಪಿಂಡ ೩೫ |
| ಮೇಷ ೧× ೭= ೭ | |
| —— | |
| ರಾಶಿಪಿಂಡ ೭೩ | |

೭೩ + ೩೫ = ೧೦೮ ಶೋಧ್ಯಪಿಂಡ

ಕುಂಡಲಿಯಲ್ಲಿ ಶುಕ್ರನಿಗೆ ೮ ಬಿಂದುಗಳು ಬಿದ್ದಿದ್ದರೆ ವಿಲಾಸ, ಸೌಖ್ಯ. ಉತ್ತಮ ಉಡುಪು-ತೊಡಪುಗಳು. ಸ್ತ್ರೀಸೌಖ್ಯ, ಪುಷ್ಪ, ಅನ್ನಪಾನಾ-ಗಳು.

೭ ಬಿಂದುಗಳಿದ್ದರೆ - ಅಲಂಕಾರಗಳು, ರತ್ನಾದಿ ಆಭರಣಗಳು.

೬ ಬಿಂದುಗಳಿದ್ದರೆ ಪ್ರೀತಿಸುವ ಹೆಂಡತಿ.

೫ " ಸನ್ಮಿತ್ರರ ಸಹವಾಸ.

೪ " ಸಾಮಾನ್ಯ ಸೌಖ್ಯ

೩ " ಹಳ್ಳಿಗರೊಡನೆ, ನಾಗರಿಕರೊಡನೆ ಕಲಹ, ಅರುಚಿ.

೨ " ಇಳಿತ, ಅಜಾರಿ.

೧ ರೋಗ, ಕಫ, ಜಲಾದಿಗಳಿಂದ. ಶೂನ್ಯಬಿಂದು ಇದ್ದಲ್ಲಿ ತರತರದ ಸಂಕಟಗಳು. ಉದಾಹೃತ ಕುಂಡಲಿಯಲ್ಲಿ ೪ ಬಿಂದುಗಳಿರುವವು. ಶುಕ್ರ-ನಿಗೆ ಮಿಥುನ ಕರ್ಕರಾಶಿಯಲ್ಲಿ ೬ ಬಿಂದುಗಳಿರುವವು. ಈ ರಾಶಿಯಲ್ಲಿ ಶುಕ್ರನ ಸಂಚಾರವಿದ್ದಾಗ ಪ್ರತಿಪುರುಷ ಸಂಗೀತಾಭ್ಯಾಸ, ವಿವಾಹಾದಿ ಮಂಗಲ ಕಾರ್ಯಗಳು, ರೇಶಿಮೆವಸ್ತ್ರ ಖರೀದಿ, ವಿಲಾಸದ ವಸ್ತುಗಳನ್ನು ಕೊಳ್ಳಬೇಕು. ಯಾವ ಕುಂಡಲಿಯಲ್ಲಿ ಯಾವ ರಾಶಿಯಲ್ಲಿ ಹೆಚ್ಚು ಬಿಂದು-ಗಳಿರುವವೋ, ಆ ರಾಶಿಯಲ್ಲಿ ಶುಕ್ರನ ಸಂಚಾರವಿದ್ದಾಗ ಈ ವ್ಯವಹಾರ ಮಾಡಬೇಕು.

ಏಕಾಧಿಪತ್ಯ ಶೋಧನದ ನಂತರ ಮಿಥುನ, ಕರ್ಕ, ಧನುರಾಶಿಗಳಲ್ಲಿ ಹೆಚ್ಚು ಬಿಂದುಗಳಿರುವವು. ಪೂರ್ವ, ಉತ್ತರ, ಪಶ್ಚಿಮ ದಿಕ್ಕುಗಳಲ್ಲಿ ಭೂಮಿ, ಕಲತ್ರ, ವಿತ್ತ ವ್ಯವಹಾರ ಮಾಡಬೇಕು. ಶುಕ್ರನ ಅಷ್ಟಕವರ್ಗ-ದಲ್ಲಿ ಶುಕ್ರನಿಂದ ಏಳನೆಯ ಸ್ಥಾನದಲ್ಲಿ ಯಾವ ಗ್ರಹದಿಂದ ಬಿಂದು ಬಿದ್ದಿ ರುವದೋ ಆ ಗ್ರಹದ ನಕ್ಷತ್ರತ್ರಯದ (೧ರಲ್ಲಿ) ಒಂದರಲ್ಲಿ ಅವಳು ಹುಟ್ಟಿ-ದ್ದರೆ ರವಿಯು ಬಿಂದುವನ್ನಿಕ್ಕಿದ್ದರೆ, ಕೃತ್ತಿಕಾ, ಉತ್ತರಾ, ಉತ್ತರಾಷಾಢಾ-ದಲ್ಲಿ ಅವಳು ಹುಟ್ಟಿದ್ದರೆ ಪ್ರಾಣದಂತೆ ಆಕೆ ಪತಿಪ್ರಿಯಳಾಗುವಳು.

ಚಂದ್ರನಿಂದ ಬಿಂದು ಸಿಕ್ಕಿದ್ದರೆ ಅವಳು ರೋಹಿಣಿ-ಹಸ್ತಾ-ಶ್ರವಣದಲ್ಲಿ ಹುಟ್ಟಿರಬೇಕು. ಅಂದರೆ ಆಕೆ ನಿಜವಾಗಿ ಅವನಿಗೆ ಮನೋವಲ್ಲಭೆಯಾಗುವಳು.

ಮಂಗಳನು ಬಿಂದುದಾತಾರನಾಗಿದ್ದರೆ ಅವಳು ಮೃಗಶಿರಾ, ಚಿತ್ರಾ, ಧನಿಷ್ಠಾದಲ್ಲಿ ಹುಟ್ಟಿರಬೇಕು. ಅಂದರೆ ಅವಳು ಪತಿಗಾಗಿ ಸತ್ಕಾರ್ಯ ಮಾಡುವಳು.

ಕೇತುವಿನ ನಕ್ಷತ್ರಗಳಿಗೂ ಇದೇ ಫಲ. ಬುಧನು ಬಿಂದುಕೊಟ್ಟಿದ್ದರೆ ಆಶ್ಲೇಷಾ, ಜ್ಯೇಷ್ಠಾ-ರೇವತಿಯಲ್ಲಿ ಅವಳ ಜನ್ಮವಿರಬೇಕು. ಪತಿಗೆ ಆಜ್ಞಾಧಾರಕಳಾಗುವಳು. ಗುರು ಬಿಂದುಕೊಟ್ಟಿದ್ದರೆ ಪುನರ್ವಸು-ವಿಶಾಖಾ-ಪೂರ್ವಾಭಾದ್ರಪದದಲ್ಲಿ ಜನ್ಮ ನಕ್ಷತ್ರವಿದ್ದರೆ ಅವಳಿಂದ ಸದ್ಗುಣಿಗಳಾದ ಮಕ್ಕಳು ಹುಟ್ಟುವರು.

ಶುಕ್ರನು ಬಿಂದು ಕೊಟ್ಟಿದ್ದರೆ ಶುಕ್ರನ ನಕ್ಷತ್ರದಲ್ಲಿ ಭರಣಿ ಪೂರ್ವಾ-ಷಾಢಾದಲ್ಲಿದ್ದರೆ ಪತಿಯು ಅವಳಿಂದ ಯಥೇಚ್ಛನಾಗಿ ಸಂಸಾರಸುಖವನ್ನು ಪಡೆಯುವನು. ಶನಿಯಿಂದ ಬಿಂದು ಬಿದ್ದರೆ ಪುಷ್ಯ-ಅನುರಾಧಾ ಉತ್ತರಾ-ಭಾದ್ರಪದದಲ್ಲಿ ಅವಳ ಜನ್ಮವಿದ್ದರೆ, ಅವಳು ಪತಿಯನ್ನು ವಿಧೇಯದಂತೆ ಸೇವಿಸುವಳು—ಆಜ್ಞಾಧಾರಕಳಾಗಿ. ಇದರಂತೆ ರಾಹುವಿನ ನಕ್ಷತ್ರಗಳಿಗೆ ಫಲ.

ಉದಾಹೃತ ಕುಂಡಲಿಯಲ್ಲಿ ಶನಿ, ರವಿ, ಚಂದ್ರ, ಬುಧರು ಬಿಂದುಗಳನ್ನು ಕೊಟ್ಟಿರುವರು. ಆದರೆ ಅವರ ಪತ್ನಿಯರ ನಕ್ಷತ್ರಗಳು ನನಗೆ ಜ್ಞಾತವಿಲ್ಲ. ವಿವಾಹ ಪೂರ್ವದಲ್ಲಿ ಕೂಡಿಸಿ ನೋಡುವಾಗ ಶುಕ್ರನ ಅಷ್ಟಕವರ್ಗವನ್ನು ಪರಿಶೀಲಿಸಬೇಕು.

ಸೂರ್ಯಾದ್ಯಕ್ಷ್ಯಯುತೇ ಸಿತಾಷ್ಟಭವನೇ ಸ್ತ್ರೀಯಾಷ್ಟ
ವರ್ಗೇ ತದ್ಯ—
ಕ್ಷೋದ್ಭೂತಾ ವನಿತಾ ಕ್ರಮಾದಸು ಸಮಾಜ್ಞೇಯಾ
ಮನೋವಲ್ಲಭಾ ।

ತತ್ಕನರ್ಗಾನುಗುಣಾ ರತಾನುಸರಣೀ ಶಂತಾನೆ
ಸಂಶಾದಿನೀ
ಪತ್ಯುಃಕಾವ್ಯ ಸುಖಪ್ರದಾನನಿಪುಣಾ ದಾಸೀಸನಾ-
ಕರ್ಮಸು ।

ವರನ ಕುಂಡಲಿಯಲ್ಲಿ ಶುಕ್ರನ ಅಷ್ಟಕವರ್ಗದಲ್ಲಿ ಹೆಚ್ಚು ಬಿಂದು-ಗಳು ಬಿದ್ದಿರುವ ರಾಶಿಯಲ್ಲಿ ಜನಿಸಿದ ಕನ್ಯೆಯನ್ನೇ ಅವನು ಮದುವೆಯಾಗ ಬೇಕು. ಇದರಂತೆ ಕನ್ಯೆಯ ಕುಂಡಲಿಯಲ್ಲಿ ಹೆಚ್ಚು ಬಿಂದುಗಳು ಬಿದ್ದಿ-ರುವ ರಾಶಿಯ ವರನನ್ನು ಕನ್ಯೆ ವರಿಸಬೇಕು. ಇಂದು ಅಗ್ಗದರದಲ್ಲಿ ಜ್ಯೋತಿಷವು ಮಾರಹತ್ತಿ, ಅದರ ಗೌರವವನ್ನು ಉದರಂಭರಿಗಳು ಕಳೆದು ಬಿಟ್ಟಿರುವರು. ಇದು ಶಾಸ್ತ್ರಕ್ಕೆ ಲಾಘವವಲ್ಲ, ಮಾರಿಕೊಳ್ಳುವವರ ಲಾಘ-ವವು.

ಶುಕ್ರನು ೮ ಬಿಂದುಗಳಿಂದ ಯುಕ್ತನಾಗಿ ಕೇಂದ್ರಕೋನದಲ್ಲಿದ್ದರೆ, ಆಯುಷ್ಯವಿರುವ ವರೆಗೆ ವಿತ್ತರತ್ನಾದಿಗಳಿಂದ, ಉತ್ತಮ ವಾಹನಾದಿಗಳಿಂದ ಕೂಡಿಕೊಂಡು ಸುಖಿಯಾಗುವನು.

ಶನಿಯ ಅಂಶದಲ್ಲಿ ಶನಿಯುಕ್ತನಾಗಿ ಶನಿಕ್ಷೇತ್ರದಲ್ಲಿ ಭೃಗು ಇದ್ದರೆ ನೀಚಾಂಶದಲ್ಲಿ ಪಾಪಸಂಯುಕ್ತನಾಗಿದ್ದರೆ ನೀಚ ಸ್ತ್ರೀ ಭೋಗ.

ಶುಕ್ರನ ಶೋಧ್ಯಪಿಂಡವನ್ನು ಅವನಿಂದ ಸಪ್ತಮದಲ್ಲಿ ಶೋಧನಕ್ಕಿಂತ ಪೂರ್ವದಲ್ಲಿರುವ ಬಿಂದುಗಳಿಂದ ಗುಣಿಸಬೇಕು. ತದನಂತರ ೨೭ ರಿಂದ ಭಾಗಿಸಬೇಕು. ಶಿಷ್ಟ ಸಂಖ್ಯೆಯನ್ನು ಅಶ್ವಿನಿಯಿಂದ ಎಣಿಸಿ ಆ ನಕ್ಷತ್ರದಲ್ಲಿ ಗುರುವಿನ ಸಂಚಾರ ಅಥವಾ ರಾಶೀಶನ ದಶಾಂತರ್ದಶೆಯಲ್ಲಿ ಮದುವೆ ಯಾಗುವದು.

| | |
|---|---|
| ಶೋಧ್ಯಪಿಂಡ | ೧೦೮ |
| ಶುಕ್ರನಿಂದ ಸಪ್ತಮದಲ್ಲಿ ಬಿದ್ದ ಬಿಂದುಗಳು | × ೪ |
| | ೪೩೨ |

೨೭ ) ೪೩೨ ( ೧೬
೨೭
——
೧೬೨
೧೬೨
——
೦೦೦

೦ ಉಳಿದರೆ ರೇವತೀ ನಕ್ಷತ್ರ
ಮೀನರಾಶಿ ಬರುವದು.

ಜಾತರ ಜನ್ಮಕಾಲದಲ್ಲಿ—

ವ—ತಿ—ದಿ
ಕೇತುದಶಾ ಭೋಗ್ಯ ೦—೦—೧೬
+ ಶುಕ್ರ ೨೦—೦— ೦
————————
೨೦—೦—೧೬
+ ರವಿ ೬—೦— ೦
————————
೨೬—೦—೧೬

ರವಿಯ ಮಹಾದೆಶೆಯಲ್ಲಿ ಅಂತರ್ದಶಾ

೨೦— ೦—೧೬
+ ರವಿ ೦— ೩—೧೮
——————
೨೦— ೪— ೪
+ ಚಂ. ೦— ೬— ೦
——————
೨೦—೧೦— ೪
+ ಮಂ. ೦— ೪— ೬
——————
೨೧— ೨—೧೦

ಶುಕ್ರನ ದಶೆಯಲ್ಲಿ

೨೦— ೦—೬
-ಕೇತು ೧— ೨—೦
————
೧೮—೧೦—೬
-ಬುಧ ೨—೧೦—೦
——————
೧೬— ೦—೬

(ಮುಂದಿನ ಪುಟಕ್ಕೆ)

| | | |
|---|---|---|
| | | ... |
| + | ರಾ. | ೦—೧೦—೨೪ |
| | | ೨೨—೧—೪ |
| + | ಗುರು | ೦—೯—೧೮ |
| | | ೨೨—೧೦—೨೨ |

೧೬ನೆಯ ವರ್ಷದಿಂದ ಶುಕ್ರನ ಮಹಾದಶೆಯಲ್ಲಿ ಬುಧನ ಭುಕ್ತಿ ೧೮ ವ. ೧೦ ತಿ. ೬ ದಿ. ವರೆಗೆ ಇರುವದು. ರೇವತಿಯ ಅಧಿಪತಿ ಬುಧ. ಅವನ ಅಂತರ್ದೆಶೆಯಲ್ಲಿ ಮದುವೆಯಾಗಿರುವದು. ೧೯೨೫ ಜೂನದಲ್ಲಿ ೨ನೆಯ ಮದುವೆ ಗುರುವಿನ ಅಂತರ್ದೆಶೆಯಲ್ಲಿ (ಮೀನ ರಾಶಿಯ ಅಧಿಪತಿ ಗುರು) ಆಗಿರುವದು. ೧೯೩೦ನೆಯ ಇಸವಿಯಲ್ಲಿ ಶುಕ್ರನಿರುವಲ್ಲಿ ಸಮುದಾಯಾಷ್ಟಕವರ್ಗದಲ್ಲಿ ೨೨ ಬಿಂದುಗಳಿರುವವು. ೨೨ನೆಯ ವರ್ಷಕ್ಕೆ ೧೯೩೦ನೇ ಇಸವಿಯಲ್ಲಿ ಮತ್ತೊಂದು ಮದುವೆಯಾಗಿದೆ- ಶುಕ್ರ ವಿವಾಹಕಾರಕ.

**ಲಗ್ನಾತ್ ಕಾಮಪಕಾರಕೌ ಶುಭಕರೌ ವೀರ್ಯಾಧಿಕೇ**
**ಸಪ್ತಮೇ ।**
**ಪತ್ಯಾ ಸಾಕಮುಪೇತಿ ಮೃತ್ಯುಮಬಲಾ ಪಾಪೈರ-**
**ಯುಕ್ತೇಕ್ಷಿತೇ ॥**
**ಕಾಮಚ್ಛಿದ್ರದಶಾಪಹಾರ ಸಮಯೇ ಶುಕ್ರಾಷ್ಟ-**
**ವರ್ಗೋದಿತೇ ।**
**ರಾಶೌ ಭಾನುಸುತೇ ಕಲತ್ರ ಮರಣಂ ಜೀವೇ**
**ತದಂಶಾನ್ವಿತೇ ॥**

ಸಪ್ತಮಾಧಿಪತಿಯೂ ಮತ್ತು ಸಪ್ತಮ ಭಾವಕಾರ (ಶುಕ್ರ) ಇಬ್ಬರೂ ಶುಭ ಗ್ರಹಗಳಿದ್ದು ಸಪ್ತಮ ಭಾವದಲ್ಲಿದ್ದರೆ ಮತ್ತು ಬಲಶಾಲಿಯಾಗಿದ್ದರೆ ಪಾಪಗ್ರಹಗಳಿಂದ ಯುಕ್ತವೂ ದೃಷ್ಟವೂ ಆಗಿರದಿದ್ದರೆ ಪತಿಯೊಡನೆ ಸ್ತ್ರೀಯು ಮರಣವನ್ನು ಹೊಂದುವಳು. (ಸ್ತ್ರೀ ಜಾತಕದಲ್ಲಿ ಇದನ್ನು ಅವಶ್ಯವಾಗಿ ನೋಡಬಹುದು.) ಸಪ್ತಮಭಾವಕ್ಕೆ ಸಂಬಂಧಪಟ್ಟ ಗ್ರಹದ ಛಿದ್ರ ದಶೆ.

ಯಲ್ಲಿ ಅಥವಾ ಅಂತರ್ದೆಶೆಯಲ್ಲಿ, ಶುಕ್ರನ ಅಷ್ಟಕವರ್ಗದಲ್ಲಿ ಭಯದ ರಾಶಿಯಲ್ಲಿ ಶನಿಯ ಸಂಚಾರವಿದ್ದಾಗ, ಶನಿಯ ಸಂಚಾರದಲ್ಲಿ ಶನಿಯ ನವಾಂಶದಲ್ಲಿ ಗುರುವಿನ ಸಂಚಾರವಿದ್ದಾಗ ಕಲತ್ರ ಮರಣ ಸಂಭವಿಸುವದು.

**ಕ್ರೂರಾಸ್ತ ನೀಚಾಪಜಯ ಖೇಚರಸ್ಯ ದಶಾ ಯದಿ ।**
**ದಶಾಚ್ಛಿದ್ರಮಿತಿ ಜ್ಞೇಯಂ ಪ್ರವದಂತಿ ವಿಪಶ್ಚಿತಃ ।**

ಪಾಪ, ಗ್ರಹಣದಲ್ಲಿದ್ದ, ದುರ್ಬಲ (ನೀಚ) ದುಃಸ್ಥಾನಸ್ಥಿತ ಗ್ರಹಗಳ ದಶೆ ಛಿದ್ರದಶೆ.

| | |
|---|---|
| ಶುಕ್ರನ ಶೋಧ್ಯಪಿಂಡ | ೧೦೮ |
| ಶುಕ್ರನಿಂದ ೭ ರಲ್ಲಿ ಬಿದ್ದ ಬಿಂದುಗಳು (ಶೋಧನ ಪೂರ್ವದಲ್ಲಿ) | × ೪ |
| | ೪೩೨ |

ಹನ್ನೆರಡರಿಂದ ಭಾಗಿಸಲಾಗಿ ೧೨ ) ೪೩೨ ( ೩೬

೩೬
———
೭೨
೭೨
———
ಶೂನ್ಯ ಉಳಿಯುವದು. ೦೦

೧ ಉಳಿದರೆ ಮೇಷ, ಶೂನ್ಯ ಉಳಿದರೆ ಮೀನರಾಶಿ ತಕ್ಕೊಳ್ಳಬೇಕು. ಮೀನರಾಶಿಯಲ್ಲಿ ಶನಿಯ ಸಂಚಾರವಿದ್ದಾಗ ಗುರು ಯಾವದೇ ರಾಶಿಯಲ್ಲಿ ಇರಲಿ, ಮೀನ ನವಾಂಶದಲ್ಲಿ ಬಂದಾಗ ಹೆಂಡತಿಗೆ ಆಜಾರಿ-ಅಸ್ವಾಸ್ಥ್ಯ ಸಂಭವವಿರುವದು.

೧೯೬೬ ಜುಲೈದಲ್ಲಿ ಶನಿ ಮೀನದಲ್ಲಿ, ಗುರು ತನ್ನ ನವಾಂಶದಲ್ಲಿ ಬಂದಿದ್ದನು.

ಛಿದ್ರದಿಶೆ—'ಜಾತಕ ಪಾರಿಜಾತಕ'ಕಾರನ ಪದ್ಯವನ್ನು ಮೇಲೆ ಕೊಟ್ಟಿರು-ವೆವು. ಇನ್ನುಳಿದ ಗ್ರಂಥಕಾರರ ಮತದಂತೆ ಛಿದ್ರದಶೆ.

ಅಷ್ಟಮಾಧಿಪತಿ.

ಅಷ್ಟಮದಲ್ಲಿದ್ದ ಗ್ರಹ.

ಅಷ್ಟಮ ಭಾವವನ್ನು ನೋಡುವ ಗ್ರಹ.

ಲಗ್ನದಿಂದ ೨೨ ನೆಯ ದ್ರೇಷ್ಕಾಣದ ಅಧಿಪತಿ.

ಅಷ್ಟಮಾಧಿಪತಿಯಿಂದ ಕೂಡಿರುವ ಗ್ರಹ.

ಚಂದ್ರನ ರಾಶಿಯಿಂದ ೬೪ ನೆಯ ನವಾಂಶದ ಅಧಿಪತಿ.

೮ ನೆಯ ಭಾವದ ಅಧಿಪತಿಯ ಅಧಿಶತ್ರುವಾಗಿರುವ ಗ್ರಹ— ಇವು-ಗಳಲ್ಲಿ ಬಲಿಷ್ಠವಾಗಿರುವ ಗ್ರಹದ ದಿಶೆಯಲ್ಲಿ ಮೃತ್ಯುಸಂಭವವಿರುವದು.

ಶುಕ್ರನ ಅಷ್ಟಕವರ್ಗದಿಂದ ತಿಳಿದು ಬರುವ ಅಂಶಗಳು:-

ಶುಕ್ರನು ೫, ೬ ಬಿಂದುಗಳಿಂದ ಯುಕ್ತನಾಗಿ ಕೇಂದ್ರ ತ್ರಿಕೋನ-ದಲ್ಲಿದ್ದರೆ ಸುಖಿಯಾದ ಕೌಟುಂಬಿಕ ಜೀವನವೂ, ಸುಖಿಯಾದ ಸಂಸಾರವೂ ಇರುವದು. ಇಂತಹ ಶುಕ್ರನಿಗೆ ಮಂಗಳನ ದೃಷ್ಟಿಯಿದ್ದರೆ ಉಚ್ಚಕುಲೀನ ಸತ್ನಿ ದೊರಕುವಳು. ( ಕುಜ ದೋಷವನ್ನು ನೋಡುವವರು ಇಂತಹ ಬಲವತ್ತರ ಅಪವಾದಗಳನ್ನು ಲಕ್ಷಿಸಬೇಕು.)

ಶುಕ್ರನು ಲಗ್ನದಲ್ಲಿ ಅಥವಾ ದಶಮದಲ್ಲಿದ್ದು ಅಥವಾ ಚತುರ್ಥದಲ್ಲಿ ೫ ಬಿಂದುಗಳಿಂದ ಕೂಡಿದ್ದರೆ, ಶುಭಗ್ರಹದ ದೃಷ್ಟಿಯಲ್ಲಿದ್ದರೆ ಅವನಿಗೆ ಸುಂದರವಾಹನ ಯೋಗವಿರುವದು. ಇಂತಹ ಯೋಗವಿರುವಾಗ ಶುಕ್ರನು ಮಂಗಳನ ಮನೆಯಲ್ಲಿದ್ದರೆ ವಿಪುಲ ಸಂಪತ್ತು, ಅನೇಕವಿಧ ವಾಹನಗಳು.

ಶುಕ್ರನು ೧-೪-೧೦ ರಲ್ಲಿದ್ದು ಅಥವಾ ೫-೯ ರಲ್ಲಿದ್ದು ೫ ಅಥವಾ ಹೆಚ್ಚು ಬಿಂದುಗಳಿಂದ ಯುಕ್ತನಾಗಿದ್ದರೆ ಮಂಗಳನ ದೃಷ್ಟಿಯಲ್ಲಿ ಇಲ್ಲದಿ-ದ್ದರೆ ಅವನ ವಿವಾಹವು ಬೇಗ ಜರುಗುವದು.

ಶುಕ್ರನು ೫ ಬಿಂದುಗಳಿಂದ ಕೂಡಿದ್ದರೂ ದುರ್ಬಲ ರಾಶಿಯಲ್ಲಿದ್ದರೆ, ನವಾಂಶದಿಂದ ದುರ್ಬಲನಾಗಿದ್ದರೆ, ಮಂಗಳನಿಂದ ಕೂಡಿದ್ದರೆ ಅಥವಾ ಅವನ ದೃಷ್ಟಿಯಲ್ಲಿದ್ದರೆ ಮದುವೆಯ ವಿಷಯದಲ್ಲಿ ತೊಂದರೆಗಳು. ತ್ರಿಕೋನ-ದಲ್ಲಿ ಅಥವಾ ಧನದಲ್ಲಿ ಶುಕ್ರನಿದ್ದು ಪಾಪಗ್ರಹದ ದೃಷ್ಟಿ ಇದ್ದಲ್ಲಿ ಮದು-ವೆಯ ಬಗ್ಗೆ ವಿಘ್ನಗಳು.

ಶುಕ್ರನಿರುವ ರಾಶೀಶನು ಕೇಂದ್ರ ತ್ರಿಕೋನದಲ್ಲಿದ್ದು ೫ ಬಿಂದುಗಳಿಂದ ಕೂಡಿದ್ದರೆ ಸಂಪತ್ತು, ಭೂಮಿ, ವಾಹನಗಳು ದೊರಕುವವು. ಭಾಗ್ಯ-ಶಾಲಿಯಾಗುವನು. ಶುಕ್ರನು ರಾಶಿಯ ಅಧಿಪತಿ. ಅವನಿಂದ ೬-೮ ರಲ್ಲಿದ್ದು, ಇದು ಲಗ್ನಕ್ಕೆ ತ್ರಿಕೋನ ಆಗಿರುವಲ್ಲಿ ಅವನು ತನ್ನ ಹೆಂಡತಿಯನ್ನು ಸರಿಯಾಗಿ ನಡೆಸಿಕೊಳ್ಳುವದಿಲ್ಲ.

ಸಪ್ತಮಾಧಿಪತಿ, ಪಂಚಮಾಧಿಪತಿಗಳು ಪರಸ್ಪರ ತ್ರಿಕೋನದಲ್ಲಿದ್ದು ಮಂಗಳನು ಸಪ್ತಮದಲ್ಲಿದ್ದರೆ ಅವನ ಹೆಂಡತಿ ಅವನನ್ನು ತ್ಯಾಗ ಮಾಡು-ವಳು.

ಶನಿ ಅಥವಾ ಮಂಗಳನು ಸಪ್ತಮದಲ್ಲಿದ್ದು ಸಪ್ತಮಾಧಿಪನು ಶನಿ, ಮಂಗಳರ ನವಾಂಶದಲ್ಲಿದ್ದರೆ ಅಥವಾ ಅವರ ದೃಷ್ಟಿಯಲ್ಲಿದ್ದರೆ ಪತಿಯ ಶೀಲವು ಸಂಶಯಾತೀತವಾಗಿರುವದಿಲ್ಲ.

ಶುಕ್ರನು ೪ ಬಿಂದುಗಳಿಂದ ಕೂಡಿ ದುರ್ಬಲ ರಾಶಿಯಲ್ಲಿದ್ದರೆ ಅಥವಾ ದುರ್ಬಲ ದಶಾಂಶದಲ್ಲಿದ್ದರೆ, ಮಂಗಳನ ದೃಷ್ಟಿ ಇದ್ದರೆ ಅವನ ಹೆಂಡತಿ ಅಪವಾದಕ್ಕೆ ಗುರಿಯಾಗುವಳು.

ಶುಕ್ರನು ೧-೩ ಬಿಂದುಗಳಿಂದ ಕೂಡಿ ಶನಿಯ ರಾಶಿಯಲ್ಲಿ ಅಥವಾ ಶನಿಯ ನವಾಂಶದಲ್ಲಿದ್ದರೆ ಮತ್ತು ಮಂಗಳನ ದೃಷ್ಟಿ ಇದ್ದಲ್ಲಿ ಹೆಂಡತಿ ಕುಲಟೆಯಾಗುವಳು.

ಮಂಗಳನು ೭ ರಲ್ಲಿ, ಚಂದ್ರನು ೭ ರಲ್ಲಿ, ಶುಕ್ರನು ೧೨ ರಲ್ಲಿದ್ದು ಇವರಲ್ಲಿ ಓರ್ವನು ಶನಿ, ರಾಹುಗಳ ದೃಷ್ಟಿಯಲ್ಲಿದ್ದರೆ ಅಥವಾ ಯುತಿಯಲ್ಲಿ-ದ್ದರೆ ವಿಧವಾ ಸಂಗವುಂಟಾಗುವದು.

ಚಂದ್ರನು ಸಪ್ತಮದಲ್ಲಿದ್ದು ಸಪ್ತಮಾಧಿಪತಿಗೆ ರಾಹುವಿನ ಸಂಬಂಧ ಬಂದಲ್ಲಿ, ಶುಕ್ರನು ಉಚ್ಚರಾಶಿಯಲ್ಲಿದ್ದರೆ ವೃದ್ಧವನಿತಾ ಭೋಗವುಂಟಾಗು– ವದು. ಶುಕ್ರನು ೨-೩ ಬಿಂದುಗಳಿಂದ ಕೂಡಿ ೬-೭-೮-೧೨ ರಲ್ಲಿದ್ದರೆ ಸಪ್ತಮಾಧಿಪನು ದುರ್ಬಲನಾಗಿರುವಲ್ಲಿ ನೀಚ ಸ್ತ್ರೀ ಸಂಗವುಂಟಾಗುವದು.

ಶುಕ್ರನು ೨-೩ ಬಿಂದುಗಳಿಂದ ಕೂಡಿ ೭-೮-೧೨ ರಲ್ಲಿದ್ದು ಶನಿಯ ಯುತಿಯಲ್ಲಿ ಅಥವಾ ದೃಷ್ಟಿಯಲ್ಲಿದ್ದರೆ ಅಂಧ ಸ್ತ್ರೀಯ ಸಂಬಂಧ ಬರುವದು.

ಶನಿ ಅಥವಾ ಮಂಗಳನು ೨ ರಲ್ಲಿ ಅಥವಾ ೭ ರಲ್ಲಿದ್ದು ಶುಕ್ರನು ೧೨ ರಲ್ಲಿದ್ದರೆ ಹೆಂಡತಿ ಜೀವಂತಳಿದ್ದರೂ ಪುನಃ ಮದುವೆಯಾಗುವನು.

ಸಪ್ತಮ ಭಾವಾಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶಿಯ ಅಧಿಪತಿ ಪಾಪಗ್ರಹಗಳಿಂದ ದೃಷ್ಟನಾಗಿರುವಲ್ಲಿ ಅಥವಾ ಯುತನಾಗಿರುವಲ್ಲಿ ದ್ವಿಭಾರ್ಯಾ ಯೋಗವಿರುವದು.

ಶುಕ್ರನು ದುರ್ಬಲನಿದ್ದು ಅಥವಾ ಅಸ್ತನಿದ್ದು ಶುಭಗ್ರಹದ ದೃಷ್ಟಿ ಇಲ್ಲದೆ ( ಪಾಪಗ್ರಹಗಳೂ ಒಂದೊಂದು ಲಗ್ನಕ್ಕೆ ಶುಭಗ್ರಹಗಳಾಗುವವು. ) ಸಪ್ತಮಾಧಿಪತಿ ಪಾಪಕರ್ತರಿಯಲ್ಲಿದ್ದರೆ ಅವನಿಗೆ ಕಲತ್ರತ್ರಯ ಯೋಗ– ವಿರುವದು.

ಸಪ್ತಮಾಧಿಪನು ನವಮದಲ್ಲಿದ್ದು, ಪಾಪಗ್ರಹ ದ್ವಿತೀಯಲ್ಲಿದ್ದು ಶುಕ್ರನು ದ್ವಿಸ್ವಭಾವಿ ರಾಶಿಯಲ್ಲಿದ್ದರೆ ಇಬ್ಬರು ಹೆಂಡತಿಯರ ಯೋಗ– ವಿರುವದು. ಸಪ್ತಮ ಭಾವದಲ್ಲಿ ಶನಿಯ ರಾಶಿಯಿದ್ದು ಅಥವಾ ಮಂಗಳನ ರಾಶಿಯಿದ್ದು ಶುಕ್ರನ ಮೇಲೆ ಮಂಗಳನ ದೃಷ್ಟಿ ಇರುವಲ್ಲಿ, ಪಾಪಗ್ರಹ– ಗಳು ದ್ವಿತೀಯದಲ್ಲಿ ಇರುವಲ್ಲಿ ಅವನ ಮದುವೆ ಬಲಾತ್ಕಾರದಿಂದ ನೆರವೇರಿ- ಸಲ್ಪಡುವದು. ಚಂದ್ರನಿರುವ ನವಾಂಶರಾಶಿ ಅಧಿಪತಿ ಲಗ್ನಸಪ್ತಮಗಳ ಅಧಿಪತಿಗಳ ಮಧ್ಯದಲ್ಲಿ ಇರುವಲ್ಲಿ ಮತ್ತು ಅವನು ತನ್ನ ರಾಶಿಯನ್ನು ನೋಡುತ್ತಿರುವಲ್ಲಿ ಅವನ ಮದುವೆ ಬಲತ್ಕಾರದಿಂದ ಉಂಟಾಗುವದು.

ಶುಕ್ರನ ತ್ರಿಕೋನ ರಾಶಿಯಲ್ಲಿ ಅಥವಾ ಸಪ್ತಮದ ತ್ರಿಕೋನ ರಾಶಿಯಲ್ಲಿ ಗುರುವಿನ ಸಂಚಾರ ಮದುವೆಯ ಕಾಲವನ್ನು ತರುವದು.

ಶುಕ್ರನು ಸಪ್ತಮದಲ್ಲಿದ್ದು ಸಪ್ತಮಾಧಿಪತಿ ಮಂಗಳನ ದೃಷ್ಟಿಯಲ್ಲಿ–ದ್ದರೆ ಮಹಾಪ್ರಯಾಸದಿಂದ ಮದುವೆಯಾಗುವದು.

ಉತ್ತರಾಯಣದಲ್ಲಿ ಹುಟ್ಟಿದವರ ಮದುವೆ ಗುರುವಿನ ನವಾಂಶ ರಾಶಿ-ಯಲ್ಲಿ ರವಿಯ ಸಂಚಾರವಿದ್ದಾಗ ಆಗುವದು. ಅಥವಾ ಅದರ ತ್ರಿಕೋಣ ರಾಶಿಯಲ್ಲಿ ರವಿಯ ಸಂಚಾರ ಗುರುವಿನ ದೃಷ್ಟಿಯಲ್ಲಿರುವಾಗ. ದಕ್ಷಿಣಾ–ಯನದಲ್ಲಿ ಹುಟ್ಟಿದವರ ಮದುವೆ ಶುಕ್ರನ ನವಾಂಶರಾಶಿಯಲ್ಲಿ ಅಥವಾ ಅದರ ತ್ರಿಕೋನ ರಾಶಿಯಲ್ಲಿ ರವಿ ಬಂದಾಗ— ಆಗ ಗುರುವಿನ ದೃಷ್ಟಿ ಅವನ ಮೇಲೆ ಇರುವಾಗ ಆಗುವದು.

ಲಗ್ನಾಧಿಪತಿಯ ನವಾಂಶ ರಾಶಿಯಲ್ಲಿ ರವಿ ಇರುವಾಗ. ಆಗ ಗುರು-ವಿನ ದೃಷ್ಟಿ ಅವನ ಮೇಲೆ ಬೀಳುವಲ್ಲಿ ಮದುವೆ ನೆರವೇರುವದು.

ಲಗ್ನಾಷ್ಟಕವರ್ಗದಲ್ಲಿ ಶೂನ್ಯಬಿಂದುವಿರುವ ಪತಿಯ ರಾಶಿಯ ದಿಕ್ಕಿನಲ್ಲಿ ಉಂಟಾದರೆ ಮದುವೆ ಅಸುಖಕ್ಕೆ ಕಾರಣವಾಗುವದು. ಪತಿಯ ಲಗ್ನಾಷ್ಟಕವರ್ಗದಲ್ಲಿ ಹೆಚ್ಚು ಬಿಂದುಗಳಿರುವ ರಾಶಿಯ ದಿಕ್ಕಿನಿಂದ ಕನ್ಯಾ ಪ್ರಾಪ್ತಿಯಾಗಿದ್ದರೆ ಸುಖ, ಕೀರ್ತಿ, ದೀರ್ಘಜೀವನ, ಸಂತಾನಪ್ರಾಪ್ತಿ ಎಲ್ಲ ದೊರಕುವವು.

# ಶನಿಯ ಅಷ್ಟಕವರ್ಗ

ಶನಿಯಿಂದ ೩-೫-೬-೧೧-ರಲ್ಲಿ ಬಿಂದುಗಳನ್ನು ಇಡಿರಿ.

ಲಗ್ನದಿಂದ ೧-೩-೪-೬-೧೦-೧೧ ರಲ್ಲಿ ,,

ಸೂರ್ಯನಿಂದ ೧-೨-೪-೭-೮-೧೦-೧೧ ರಲ್ಲಿ ,,

ಚಂದ್ರನಿಂದ ೩-೬-೧೧ ರಲ್ಲಿ ,,

ಮಂಗಳನಿಂದ ೩-೫-೬-೧೦-೧೧-೧೨ ರಲ್ಲಿ ,,

## ಶನಿಯ ಅಷ್ಟಕವರ್ಗ



ಬುಧನಿಂದ ೬-೮-೯-೧೦-೧೧-೧೨ ರಲ್ಲಿ ಬಿಂದುಗಳನ್ನಿಡಬೇಕು.
ಗುರುವಿನಿಂದ ೫-೬-೧೧-೧೨ ರಲ್ಲಿ ,,
ಶುಕ್ರನಿಂದ ೬-೧೧-೧೨ ರಲ್ಲಿ ,,
ಈ ಪ್ರಕಾರ ಬಿಂದುಗಳನ್ನಿಡಬೇಕು. ಒಟ್ಟು ೩೯ ಬಿಂದುಗಳು.

ಇಲ್ಲಿ ಮಕರ, ಮೀನ ರಾಶಿಗಳಲ್ಲಿ ಶನಿಯ ಸಂಚಾರವು ಹೆಚ್ಚಿನ ಶುಭ ಫಲವನ್ನು ಕೊಡುವದು.

ಶನಿಯ ಅಷ್ಟಕವರ್ಗದಲ್ಲಿ ಶನಿಗೆ ೮ ಬಿಂದು ಬಿದ್ದಿದ್ದರೆ ಹಳ್ಳಿಯ ಅಥವಾ ನಗರದ ಮುಂದಾಳು. (ವೃಂದಪುರ ಗ್ರಾಮನೇತಾ ವಾ.)

## ತ್ರಿಕೋಣ ಶೋಧನ

೧
೧ ೨
೨
೧ ೨
೧ ೨

೭ ಬಿಂದು ಬಿದ್ದಿದ್ದರೆ, ದಾಸಿ–ಹೇಸರಗತ್ತೆ, ಒಂಟೆಗಳ ಲಾಭ.
೬ " ಚೋರ ನಾಯಕರಿಂದ, ಗುಡ್ಡಗಾಡು ಜನರಿಂದ ಮಾನ್ಯತೆ.
೫ " ಒಕ್ಕಲುತನದಿಂದ ಧಾನ್ಯಲಾಭ.
೪ " ಸಾಮಾನ್ಯ ಸುಖ.
೩ " ಧನಹಾನಿ, ಭೃತ್ಯಾದಿಗಳ ನಾಶ.
೨ " ಅಜಾರಿ, ಬಂಧನಭಯ, ಆತುರತೆ.
೧ " ಕಾರ್ಯಗಳಲ್ಲಿ ಮಾಲಿನ್ಯ.
೦ " ಭಾಗ್ಯಕ್ಷಯ

## ಏಕಾಧಿಪತ್ಯ ಶೋಧನ




ಶೋಧ್ಯಾವಶಿಷ್ಟ ೧೦

ಉದಾಹೃತ ಕುಂಡಲಿಯಲ್ಲಿ ೪ ಬಿಂದುಗಳಿರುವವು. ಆದರೆ ವೃಷಭ ಲಗ್ನಕ್ಕೆ ಯೋಗಕಾರಕನಿದ್ದು ಲಾಭದಲ್ಲಿರುವನು. ಈ ಬಗ್ಗೆ ದೇವ ಕೇರಳವು ವಿಶಿಷ್ಟ ನಿಯಮವನ್ನು ಹೇಳಿರುವದು.

ಶನಿ ನವಮ ದಶಮಾಧಿಪತಿ ಇದ್ದು ೩–೬–೧೧ ರಲ್ಲಿ ೩ ಬಿಂದುಗಳು ಕೂಡಿದ್ದರೂ ರಾಜಯೋಗ ಫಲವನ್ನು ಕೊಡುವನು. ಉದಾಹೃತ ಕುಂಡಲಿಯಲ್ಲಿ ಶನಿ ೯–೧೦ಭಾವದ ಅಧಿಪತಿ ಇದ್ದು, ೧೧ರಲ್ಲಿ ೪ ಬಿಂದುಗಳಿಂದ ಕೂಡಿರುವನು. ಕಾರಣ ಮಕರಕ್ಕೆ ಶನಿ ಬಂದ ಬಳಿಕ ರಾಜಯೋಗ ಫಲವು ಸಿಗುವದು. ಯಾಕೆಂದರೆ ಮಕರ ರಾಶಿಯಲ್ಲಿ ೫ ಬಿಂದುಗಳಿರುವವು. ೧೯೭೧ನೆಯ ಇಸವಿಯಲ್ಲಿ ಮಕರಕ್ಕೆ ಶನಿ ಬಂದಿರುವನು.

| ರಾಶಿಗುಣಾಕಾರ | ಗ್ರಹ ಗುಣಾಕಾರ |
|---|---|
| ಮಿಥುನ ೧× ೮= ೮ | ಗುರು ೧×೧೦=೧೦ |
| ಕರ್ಕ ೧× ೪= ೪ | ಚಂದ್ರ ೨× ೫=೧೦ |
| ಸಿಂಹ ೨×೧೦=೨೦ | ಶನಿ ೨×೫ =೧೦ |
| ಕನ್ಯಾ ೧× ೫= ೫ | ರವಿ ೨× ೫=೧೦ |
| ತುಲಾ ೧× ೭= ೭ | —— |
| ಮಕರ ೨× ೫=೧೦ | ಗ್ರಹಪಿಂಡ ೪೦ |
| ಮೀನ ೨×೧೨=೨೪ | |
| —— | |
| ರಾಶಿಪಿಂಡ ೭೮ | |

೭೮ + ೪೦ = ೧೧೮ ಶೋಧ್ಯಪಿಂಡ

ಶನಿಯ ಶುಭಾ ಶುಭ ಫಲಗಳನ್ನು ನಿರ್ಣಯಿಸುವಾಗ, ಆಧಾರಭೂತ ಪದ್ಯಗಳು.

**ಸ್ವಾತ್ಮನ್ಯಷ್ಟಕವರ್ಗಕೇ ಬಹುಫಲೇ ರಾಶೌ ಚರತ್ಯರ್ಕಜೇ ।**
**ದಾಸಾದಿ ಗ್ರಹಣಂ ಕೃಷಿಶ್ಚ ಫಲದಾ ।**

ಶನಿ ತನ್ನ ಅಷ್ಟಕವರ್ಗದಲ್ಲಿ ಹೆಚ್ಚು ಬಿಂದುಗಳು ಬಿದ್ದ ರಾಶಿ-ಯಲ್ಲಿ ಸಂಚರಿಸುವಾಗ ಸೇವಕರು, ಭೂಮಿ ಇವುಗಳಿಂದ ಲಾಭ. ಈ ಕಾರ್ಯಗಳನ್ನು ಆಗ ಸಾಧಿಸಬೇಕು.

**ಶೂನ್ಯೇಽರ್ಕಾಷ್ಟಕವರ್ಗೇ ಚ ಯತ್ರ ನಾಸ್ತಿ ಫಲಂ ಗೃಹೇ ।**
**ತತ್ರ ನಾಸ್ತಿ ಫಲಂ ತಸ್ಯ ಯದಾ ಯಾತಿ ಶನೈಶ್ಚರಃ ।**

ಶೂನ್ಯಬಿಂದು ಬಿದ್ದ ರಾಶಿಯಲ್ಲಿ ಅಥವಾ ೧ ಬಿಂದು ರಾಶಿಯಲ್ಲಿ ಶನಿಯ ಸತ್ಫಲಗಳು ಸಿಗಲಾರವು. ಕೃಷಿಕರ್ಮ, ಸೇವಕಾದಿ ವ್ಯವಹಾರಗಳು.

ಮಂದಾದಷ್ಟಮರಾಶಿಗಾಕ್ಷನಿಹತೇ ಪಿಂಡೇ ಸ್ಯ ಸಾರಾಹೃತೇ ।
ಶಿಷ್ಟೇ ದಸ್ರಮುಖೇ ಸ್ಥಿತೇ ರ್ಕತನಯೇ ಮೃತ್ಯುಃ ತ್ರಿಕೋಣೇ ಸ್ಯ ವಾ ।

ಶನಿಯ ಶೋಧ್ಯಪಿಂಡವನ್ನು ಶನಿಯಿಂದ ೮ ರಲ್ಲಿ ಶೋಧನಕ್ಕಿಂತ ಪೂರ್ವದಲ್ಲಿ ಬಿದ್ದ ಬಿಂದುಸಂಖ್ಯೆಯಿಂದ ಗುಣಿಸಿ ೨೭ ರಿಂದ ಭಾಗಿಸಲಾಗಿ ಶೇಷ ನಕ್ಷತ್ರದಲ್ಲಿ ಅಥವಾ ತತ್ ತ್ರಿಕೋನ ನಕ್ಷತ್ರದಲ್ಲಿ ಶನಿ ಬಂದಾಗ ಮರಣಭಯವಿರುವದು.

ಸಪ್ತಘ್ನೇ ಗುಣಸಂಚಯೇ ಸುಖಹೃತೇ ಮಂದಸ್ಯ ಯಚ್ಛಿಷ್ಯತೇ ।
ದಸ್ರಾದ್ಯೇ ಗಣನೇಽಸ್ಯ ಜಾತ ಮುಡು ಯತ್ರಸ್ಥೇಽರ್ಕಪುತ್ರೇ ಮೃತಿಃ ।
ಮಂದಾಧಿಷ್ಠಿತ ಮಂದಿರಾಕ್ಷಗುಣಿತೇ ಪಿಂಡೇ ತು ಸಾರಾಹೃತೇ ।
ಶಿಷ್ಟಸ್ಯ ಪ್ರಥಮಾವಶಿಷ್ಟಮಿಲನ ಪ್ರಾಪ್ತೇಽಡು ಮಂದೇಽಥವಾ ॥

ಶನಿಯ ಶೋಧ್ಯಪಿಂಡವನ್ನು ೭ ರಿಂದ ಗುಣಿಸಬೇಕು. ಅಥವಾ ಶನಿಯಿದ್ದ ರಾಶಿಯಲ್ಲಿ ಬಿದ್ದ ಬಿಂದು ಸಂಖ್ಯೆಯಿಂದ ಶೋಧ್ಯಪಿಂಡವನ್ನು ಗುಣಿಸಬೇಕು. ಇವೆರಡೂ ಗುಣಾಕಾರಗಳಿಗೆ ಬೇರೆಬೇರೆಯಾಗಿ ೨೭ ರಿಂದ ಭಾಗಿಸಬೇಕು. ಉಳಿದ ಶೇಷಗಳನ್ನು ಕೂಡಿಸಬೇಕು. ಅದು ೨೭ ಕ್ಕಿಂತ ಹೆಚ್ಚಾದರೆ ೨೭ ಕಳೆಯಬೇಕು. ಮೂರೂ ಶೇಷಗಳನ್ನು ಅಶ್ವಿನಿಯಿಂದ ಎಣಿಸಬೇಕು. ಆ ನಕ್ಷತ್ರದಲ್ಲಿ ಶನಿಯ ಸಂಚಾರವಿದ್ದಾಗ ಮರಣಭಯ.

೭ ರಿಂದ ಗುಣಿಸಿ ೨೭ ರಿಂದ ಭಾಗಿಸಿ, ಶೇಷ ನಕ್ಷತ್ರ ಸಂಖ್ಯೆ ಮತ್ತು ಶನಿಗತ ಬಿಂದು ಸಂಖ್ಯೆಯಿಂದ ಗುಣಿಸಿ ೨೭ ರಿಂದ ಭಾಗಿಸಿ ಉಳಿದ ನಕ್ಷತ್ರ ಸಂಖ್ಯೆ ಎರಡೂ ಕೂಡಿಸಿ ಬಂದ ಸಂಖ್ಯಾಕ ನಕ್ಷತ್ರದಲ್ಲಿ ಶನಿಯ ಸಂಚಾರವೂ ಭಯಕಾರಿ.

ವಿಲಗ್ನ ಶನಿ ಮಧ್ಯಗಾನಿ ಫಲಾನಿ ಸಂಗಾಡಯೇತ್ ।
ನಗೈರ್ಭವಿಹೃತಾನಿ ಶೇಷಮಿತಭೇ ಖಲೇಯಾತಿ ಚೇತ್ ।
ತದಾ ಧನ ಸುಖ ಕ್ಷತಿಂ ತದನು ಚಾಂಗಭಾದಷ್ಟಮ ।
ಸ್ಥಿತೈರ್ವಿಗುಣಯೇತ್ ಗಣಂ ಭಹರಿಶೇಷಸ್ಥೇಶನೌ ।

ಲಗ್ನದಿಂದ ಶನಿಯವರೆಗೆ ( ಎರಡನ್ನು ಒಳಗೊಂಡು ಬಿಂದುಗಳನ್ನು ಕೂಡಿಸಿ ಬಂದ ಸಂಖ್ಯೆಗೆ ೭ ರಿಂದ ಗುಣಿಸಿ ೨೭ ರಿಂದ ಭಾಗಿಸಬೇಕು. ಶೇಷ ಸಂಖ್ಯಾಕ ನಕ್ಷತ್ರದಲ್ಲಿ ( ಅಶ್ವಿನಿಯಿಂದ ಎಣಿಸಲಾಗಿ ) ಶನಿಯ ಸಂಚಾರವು ಧನ, ಸುಖ, ಹಾನಿಯನ್ನುಂಟು ಮಾಡುವದು. ಲಗ್ನದಿಂದ ೮ ರಲ್ಲಿ ಬಿದ್ದ ಬಿಂದು ಸಂಖ್ಯೆಯಿಂದ ಶೋಧ್ಯಸಿಂಡವನ್ನು ಗುಣಿಸಿ ೨೭ ರಿಂದ ಭಾಗಿಸಲಾಗಿ ಶೇಷ ನಕ್ಷತ್ರದಲ್ಲಿ ಶನಿಯ ಸಂಚಾರವೂ ಇದೇ ಫಲವನ್ನುಂಟು ಮಾಡುವದು.

ತ್ರಿಕೋಣೈಧಿಕಾಹತ್ಯರ್ಕ ಶೋಧನಂ ವಿರಚಯ್ಯ ಚ ।
ಪಿಂಡಂ ಸಂಸ್ಥಾಪ್ಯ ಗುಣಯೇತ್ ಲಗ್ನಾದಷ್ಟಮಗೈಃ
ಫಲೈಃ ।
ಸಪ್ತವಿಂಶತಿ ಹೃಚ್ಛೇಷಂ ಮೃತ್ಯುಕಾಲಂ ವದೇದ್ಬುಧಃ ।

ತ್ರಿಕೋಣ ಏಕಾಧಿಪತ್ಯ ಶೋಧನದ ನಂತರ ಲಗ್ನದಿಂದ ಅಷ್ಟಮದಲ್ಲಿ ಬಿದ್ದ ಬಿಂದು ಸಂಖ್ಯೆಯಿಂದ ಗುಣಿಸಿ ೨೭ ರಿಂದ ಭಾಗಿಸಿ ಶೇಷ ನಕ್ಷತ್ರದಲ್ಲಿ ಶನಿಯ ಸಂಚಾರವು ಮರಣಭಯವನ್ನುಂಟು ಮಾಡುವದೆಂದು ವಿದ್ವಾಂಸರು ಹೇಳಬೇಕು.

ಉದಾಹೃತ ಕುಂಡಲಿಯಲ್ಲಿ ಮಕರದಲ್ಲಿ ಶನಿ ಸಂಚರಿಸುವಾಗ ಒಕ್ಕಲುತನದಿಂದ, ಸೇವಕರಿಂದ ಲಾಭವಾಗುವದು. ಮೇಷ ರಾಶಿಯಲ್ಲಿ ೧ ಬಿಂದು ಇರುವದು. ಮೇಷದಲ್ಲಿ ಶನಿಯ ಸಂಚಾರ ಹಾನಿಯನ್ನುಂಟು ಮಾಡುವದು. (೧೯೬೮-೬೯ ಇಸವಿಯಲ್ಲಿ ಶನಿಯ ಸಂಚಾರ ಮೇಷದಲ್ಲಿತ್ತು.)

ಶನಿಯ ಶೋಧ್ಯಪಿಂಡಕ್ಕೆ ಶನಿಯಿಂದ ಶೋಧನಕ್ಕಿಂತ ಪೂರ್ವದಲ್ಲಿ ೮ ರಲ್ಲಿ ಬಿದ್ದ ಬಿಂದುಸಂಖ್ಯೆಯಿಂದ ಗುಣಿಸಬೇಕು. ಅದಕ್ಕೆ ೨೭ ರಿಂದ ಭಾಗಿಸಬೇಕು. ಶೇಷ ನಕ್ಷತ್ರದಲ್ಲಿ ಅಥವಾ ತತ್ತ್ರಿಕೋನದಲ್ಲಿ ಶನಿ ಬಂದಾಗ ಮರಣಭಯ.

```
      ೧೧೮
      × ೪
   ---------
೨೭ ) ೪೭೨ ( ೧೭
      ೨೭
      ----
      ೨೦೨
      ೧೮೯
      ----
       ೧೩
```

ಹಸ್ತಾ-ಶ್ರವಣಾ-ರೋಹಿಣೀ ಸಂಚಾರ. ರೋಹಿಣಿಯಲ್ಲಿ ಶನಿಯ ಸಂಚಾರ ೧೯೭೧ ಇಸವಿಯಲ್ಲಿ ಪ್ರಾರಂಭವಾಗಿ ೭೩ ಕ್ಕೆ ಮುಗಿಯುತ್ತದೆ.

ಇನ್ನೊಂದು ರೀತಿ : ಶನಿಯ ಶೋಧ್ಯಪಿಂಡಕ್ಕೆ ೭ ರಿಂದ ಗುಣಿಸಬೇಕು. ಅದಕ್ಕೆ ೨೭ ರಿಂದ ಭಾಗಿಸಬೇಕು.

```
ಶೋಧ್ಯಪಿಂಡ.     ೧೧೮
               × ೭
           -----------
          ೨೭ ) ೮೨೬ ( ೩
               ೮೧
               ---
               ೧೬    ೧೬ ನೆಯ ನಕ್ಷತ್ರ ವಿಶಾಖಾ.
```

ಶೋಧ್ಯಪಿಂಡಕ್ಕೆ ಶೋಧನಕ್ಕಿಂತ ಪೂರ್ವದಲ್ಲಿ ಶನಿಗೆ ಬಿದ್ದ ಬಿಂದು-ಗಳಿಂದ ಗುಣಿಸಬೇಕು.

```
                              ೧೧೮
                            × ೪
                          ---------
೨೭ರಿಂದ ಭಾಗಿಸಬೇಕು.         ೨೭ ) ೪೭೨ ( ೧೭
                               ೨೭
                               ---
೧೬ + ೧೩ = ೨೯                   ೨೦೨
        -೨೭                    ೧೮೯
        ---                    ---
          ೨                     ೧೩
```

ಭರಣಿ ನಕ್ಷತ್ರ ಬರುವದು. ಅಂತೂ ಮೇಷ ರಾಶಿಯ ಶನಿ ಪೀಡಾಕಾರಿ. ಅಲ್ಲಿ ಒಂದು ಬಿಂದು ಬಿದ್ದಿರುವದು.

ಲಗ್ನದಿಂದ ಶನಿಯ ವರೆಗೆ ಬಿದ್ದ ಬಿಂದುಗಳು.

```
೩೮ × ೭ = ೨೬೬

    ೨೭ ) ೨೬೬ ( ೯
         ೨೪೩
         ---
```

೨೩ ೨೩ನೆಯ ನಕ್ಷತ್ರ ಧನಿಷ್ಠಾ

ಧನಿಷ್ಠಾದಲ್ಲಿ ಶನಿಯ ಸಂಚಾರ. ಧನ, ಸುಖ, ಹಾನಿಗೆ ಕಾರಣ-ವಾಗುವದು. ೧೯೬೪ ಇಸವಿಯಲ್ಲಿ.

```
ಶೋಧ್ಯಪಿಂಡ              ೧೧೮
ಲಗ್ನದಿಂದ ೮ ರಲ್ಲಿ ಬಿದ್ದ      ೩
ಬಿಂದುಗಳು.            -----
                       ೩೫೪
```

೨೭ ) ೩೫೪ ( ೧೩
೨೭
——
೮೪
೮೧
——
೩     ೩ ನೆಯ ನಕ್ಷತ್ರ ಕೃತ್ತಿಕಾ.

ಕೃತ್ತಿಕಾ ಶನಿ ಸಂಚಾರ. ಧನ, ಸುಖಗಳ ಹಾನಿ.

## ಚರಪರ್ಯಾಯ ದಶಾ–(ಜೈಮಿನಿ ಪದ್ಧತಿಯಂತೆ)

‘ ನಶಾ ಶುಭಾ ಶುಭಯುಕ್ತಾ ಧಾನ್ಯುಚ್ಚೇಚ; ’
(ಜೈಮಿನಿಸೂತ್ರ)

ವೃಷಭ– ೧೧
ಮೇಷ– ೧೨
——
೨೩
ಮೀನ– ೯
——
೩೨
ಕುಂಭ– ೧೧
——
೪೩
ಮಕರ– ೧೦
——
೫೩
ಧನು– ೮     ಅಧಿಪತಿ ಗುರು ಉಚ್ಚದಲ್ಲಿರುವನು.
——
೬೧

ವೃಶ್ಚಿಕ- + ೧. ವೃಶ್ಚಿಕ ರಾಶಿಯ ಮೇಲೆ ಗುರು-ಶುಕ್ರರ ದೃಷ್ಟಿ
——— ಇರುವದು.
೬.೨ ರಾಶ್ಯಧಿಪತಿ ಮಂಗಳನ ಸ್ವಕ್ಷೇತ್ರದಲ್ಲಿರುವನು.

ತುಲಾ - + ೬
———
೬೮

ಜೈಮಿನಿ ಪದ್ಧತಿಯಂತೆ ಚರ ರಾಶಿಯಲ್ಲಿದ್ದ ಗ್ರಹಗಳು ಸ್ಥಿರ ರಾಶಿ-ಯಲ್ಲಿದ್ದ ಗ್ರಹಗಳನ್ನು ನೋಡುವವು, ಸ್ಥಿರರಾಶಿಯಲ್ಲಿರುವವು ಚರರಾಶಿ-ಯಲ್ಲಿರುವವನ್ನು ನೋಡುವವು.

ಧನುರಾಶಿಯ ಅಧಿಪತಿ-ಗುರು ಉಚ್ಚದಲ್ಲಿರುವನು. ವೃಶ್ಚಿಕ ರಾಶಿಯ ಅಧಿಪತಿ ಮಂಗಳನು ಸ್ವಕ್ಷೇತ್ರದಲ್ಲಿರುವನು. ಕಾರಣ ವೃಶ್ಚಿಕ, ಧನುರಾಶಿ ದಶೆಯಲ್ಲಿ ೫೩ ರಿಂದ ೬೨ ರ ವರೆಗಿನ ವಯಸ್ಸಿನಲ್ಲಿ ಅಂದರೆ ೧೯೬೧ನೇ ಇಸವಿಯಿಂದ ೧೯೭೦ನೆಯ ಇಸವಿಯ ವರೆಗೆ ಅಧಿಕಾರ, ಮಾನ, ಗೌರವಗಳು ದೊರ-ಕುವವು. ಭರಣೀ—ಪೂರ್ವಾಷಾಢಾ— ಪೂರ್ವಾಗಳಲ್ಲಿ ಶನಿಯ ಸಂಚಾರದಲ್ಲಿ ದಶಮಭಾವಕ್ಕೆ ಪುಷ್ಟಿಯನ್ನುಂಟು ಮಾಡುವನು. ( ರೇಖಾಗಣನೆಯಿಂದ ಅದರ ವಿವರಣೆ ಮುಂದೆ ಇರುವದು)

೧೯೫೯ ಮಾರ್ಚ, ಎಪ್ರೀಲ, ಮೇ, ಜೂನ, ಡಿಶಂಬರ. ೧೯೬೦ ಇಸವಿಯಲ್ಲಿ ಜನೇವರಿಯಿಂದ ಎಪ್ರೀಲ ವರೆಗೆ ಶನಿಯ ಸಂಚಾರ ಪೂರ್ವಾ-ಷಾಢಾದಲ್ಲಿರುವದು. ೧೯೬೯ನೆಯ ಇಸವಿಯ ಉತ್ತರಾರ್ಧದಲ್ಲಿ ಭರಣಿಯಲ್ಲಿ ಆಗುವದು.

## ಶನಿಯ ಅಷ್ಟಕವರ್ಗದಿಂದ ತಿಳಿದುಬರುವ ಅಂಶಗಳು

ಶನಿ ೩ ಬಿಂದುಗಳಿಂದ ಕೂಡಿ ೧೦ ನೆಯ ಮನೆಯಲ್ಲಿದ್ದರೆ (ದಶ-ಮಾಧಿಪತಿಯಿಂದ ಕೂಡಿ) ಅವನು ಪರಪ್ರದೇಶದಲ್ಲಿ ವಾಸಿಸುವನು.

ಶನಿ ೨-೩ ಬಿಂದುಗಳಿಂದ ಕೂಡಿ ೨ನೇ ಮ.ನೆಯಲ್ಲಿದ್ದು ದ್ವಿತೀ-

ಯಾಧಿಪತಿಯಿಂದ ಕೂಡಿ ಇದ್ದರೆ ಅವನು ಪವಿತ್ರ. ನದಿಗಳ ಯಾತ್ರೆಯನ್ನು ಕೈಕೊಳ್ಳುವನು. (ಗಂಗಾಸ್ನಾನ ಯೋಗವನ್ನು ರಾಮಾನುಜಾಚಾರ್ಯರು ಭಾವಾರ್ಥ ರತ್ನಾಕರದಲ್ಲಿ ಹೇಳಿರುವರು.)

ಪಾಪಗ್ರಹಗಳು ದಶಮದಲ್ಲಿದ್ದು ಶನಿ, ರಾಹು ನವಮದಲ್ಲಿದ್ದರೆ ದಶಮದಿಂದ ದಶಮಾಧಿಪತಿ ಬಲಿಷ್ಠನಿದ್ದರೆ ಗಂಗಾಸ್ನಾನಯೋಗ ( ಇದು ಮೇಷ, ವೃಶ್ಚಿಕ ಲಗ್ನದವರಿಗೆ ಮಾತ್ರ ಸಂಭವಿಸುವದು.)

ಮಂಗಳನು ದುರ್ಬಲನಿದ್ದು ಶನಿಯ ಅಷ್ಟಕವರ್ಗದಲ್ಲಿ ೧ ಬಿಂದುವಿನಿಂದ ಕೂಡಿದ್ದರೆ ಮತ್ತು ಶನಿಯಿಂದ ಕೂಡಿದ್ದರೆ ಅಥವಾ ಅವನ ದೃಷ್ಟಿಯಲ್ಲಿದ್ದರೆ ಅಸ್ವಾಸ್ಥ್ಯ, ದುಃಖ ಕೆಲಕಾಲ. ಕೆಲಕಾಲ ಸುಖ–ಅಭ್ಯುದಯ.

ಶನಿ, ಚಂದ್ರರು ೪ ಬಿಂದುಗಳಿಗಿಂತ ಅಥವಾ ಹೆಚ್ಚು ಬಿಂದುಗಳಿಂದ ಲಗ್ನವನ್ನುಳಿದು ಉಳಿದ ಕೇಂದ್ರದಲ್ಲಿದ್ದರೆ, **ರಾಜಯೋಗ.**

ಲಗ್ನದಿಂದಾಗಲಿ, ಶನಿಯಿಂದಾಗಲಿ ೮ನೇ ಮನೆಯ ಅಧಿಪತಿ ದುರ್ಬಲನಾಗಿರುವಲ್ಲಿ ಅವನು ಭಿಕ್ಷುಕ ಕೈಲೋಡವಿಡಿದು ತಿರಿದುಣಿ. ಅರಸುಮನೆತನದಲ್ಲಿ ಹುಟ್ಟಿದ್ದರೂ **"ಬಡವಾದಿರರಸ, ಕಾಲೊಳ್ಳಡೆದಪಿರಿ, ಕಡಲಿಗಳೇಂ ನಿನ್ನುಡಿಯೊಳಗೆ ಪಡುವ ದೇಗುಲವೆಡೆಯಾವದು ಕುಡದ ನಿಮಗಮೀ ಎಡರಾಯ್ತು"** ಎನ್ನಿಸಿಕೊಳ್ಳುವ ಅವಸ್ಥೆ ಒದುವದು.

ಶನಿ ಕೇಂದ್ರ ತ್ರಿಕೋಣದಲ್ಲಿ ರಾಶಿಯಿಂದಾಗಲಿ ನವಾಂಶದಿಂದಾಗಲಿ ತನ್ನ ಮನೆಯಲ್ಲಿದ್ದರೆ ೧-೩ ಬಿಂದುಗಳಿಂದ ಕೂಡಿದ್ದರೂ ಅನೇಕ ಸಾಧನಗಳಿಂದ ಧನವನ್ನು ದೊರಕಿಸುವನು.

ಶನಿ – ಲಗ್ನದಲ್ಲಿ ಶೂನ್ಯಬಿಂದುಗಳಿಂದ ಕೂಡಿದ್ದರೆ ಅಲ್ಪಾಯು, ಅಸ್ವಾಸ್ಥ್ಯ. ಆದರೆ ಅಲ್ಲಿ ೪ಕ್ಕಿಂತ ಹೆಚ್ಚು ಬಿಂದುಗಳಿದ್ದರೆ ಶುಭಗ್ರಹದ ದೃಷ್ಟಿಯಿದ್ದರೆ ರಾಶಿಯಿಂದ ದುರ್ಬಲನಿದ್ದರೂ ದೀರ್ಘಾಯು.

ಶನಿ, ಮೇಷದಲ್ಲಿ, ಮಂಗಳ ಮಕರದಲ್ಲಿ ಪ್ರತಿಯೊಬ್ಬನಿಗೆ ಶನಿಯ

ಅಷ್ಟಕವರ್ಗದಲ್ಲಿ ೪ ಬಿಂದುಗಳಿದ್ದರೂ ೬ನೆಯ ಮನೆಯ ಅಧಿಪತಿ ದುರ್ಬಲ-ನಿರುವಾಗ ಅವನು ದರಿದ್ರನೂ ಸಂಧಿವಾತದಿಂದ ಪೀಡಿತನೂ ಆಗುವನು.

ಶನಿ ೧-೨ ಬಿಂದುಗಳಿಂದ ಕೂಡಿ ಯಾವ ಭಾವದಲ್ಲಿದ್ದರೂ ಅವನ ಮೃತ್ಯುವು ಪರಪ್ರದೇಶದಲ್ಲಿ ಸಂಭವವಿರುವದು.

ಶನಿ, ಗುರು, ಚಂದ್ರ, ರವಿಗಳು ತಮ್ಮ ತಮ್ಮ ಅಷ್ಟಕವರ್ಗದಲ್ಲಿ ಕಡಿಮೆ ಬಿಂದುಗಳು— (೧-೨-೩) ಬಿದ್ದ ರಾಶಿಗಳಲ್ಲಿ ಸಂಚರಿಸುವಾಗ ಪೀಡಾಕಾರಿಗಳಾಗುವರು.

---

# ಲಗ್ನಾಷ್ಟಕವರ್ಗ

ಲಗ್ನಾಷ್ಟಕವರ್ಗದಲ್ಲಿ ಸೂರ್ಯನಿಂದ ೩-೪-೬-೧೧-೧೨ ರಲ್ಲಿ ಬಿಂದುಗಳು ಬೀಳುವವು.

ಚಂದ್ರನಿಂದ ೩-೬-೧೦-೧೧-೧೨ ರಲ್ಲಿ;

ಮಂಗಳನಿಂದ ೧-೩-೬-೧೦-೧೧ ರಲ್ಲಿ;

ಬುಧನಿಂದ ೧-೨-೪-೬-೮-೧೦-೧೧ ರಲ್ಲಿ;

ಗುರುವಿನಿಂದ ೧-೨-೪-೫-೬-೭-೯-೧೦-೧೧ ರಲ್ಲಿ;

ಶುಕ್ರನಿಂದ—೧-೨-೩-೪—೫-೮-೯ ರಲ್ಲಿ;

ಶನಿಯಿಂದ ೧-೩-೪-೬-೧೦-೧೧ ರಲ್ಲಿ;

ಲಗ್ನದಿಂದ ೩-೬-೧೦-೧೧ ರಲ್ಲಿ- ಈ ಪ್ರಕಾರ ಬಿಂದುಗಳನ್ನು ಇರಿಸಬೇಕು.




ಒಟ್ಟು ೪೯ ಬಿಂದುಗಳು.

ಲಗ್ನಾಷ್ಟಕವರ್ಗದಲ್ಲಿ ಒಟ್ಟು ೪೯ ಬಿಂದುಗಳಾಗುವವು. ಅಷ್ಟಕ ವರ್ಗದ ಆಯುರ್ದಾಯವು ಯಾವ ಕುಂಡಲಿಗೆ ಲಾಗೂ ಆಗುವದೋ ಅಲ್ಲಿ ಇದರ ಪ್ರಯೋಜನ.

## ಅಷ್ಟಕವರ್ಗದಲ್ಲಿ ಬಿಂದುಗಳನ್ನಿಡುವ ಕೋಷ್ಟಕ

ರವಿಯ ಅ. ವ. ಬಿಂದು ಸಂಖ್ಯೆ ೪೮

| ರವಿ | ಚಂದ್ರ | ಮಂಗ | ಬುಧ | ಗುರು | ಶುಕ್ರ | ಶನಿ | ಲಗ್ನ |
|---|---|---|---|---|---|---|---|
| ೧ | ೩ | ೧ | ೩ | ೫ | ೬ | ೧ | ೩ |
| ೨ | ೬ | ೨ | ೫ | ೬ | ೭ | ೨ | ೪ |
| ೪ | ೧೦ | ೪ | ೬ | ೯ | ೧೨ | ೪ | ೬ |
| ೭ | ೧೧ | ೭ | ೯ | ೧೧ | | ೭ | ೧೦ |
| ೮ | | ೮ | ೧೦ | | | ೮ | ೧೧ |
| ೯ | | ೯ | ೧೧ | | | ೯ | ೧೨ |
| ೧೦ | | ೧೦ | ೧೨ | | | ೧೦ | |
| ೧೧ | | ೧೧ | | | | ೧೧ | |

ರವಿಯ ಅಷ್ಟಕವರ್ಗದಲ್ಲಿ ಆಯಾ ಗ್ರಹದಿಂದ ಮತ್ತು ಲಗ್ನದಿಂದ ಎಣಿಸಿ ಆಯಾ ಅಂಕಸೂಚಕ ಸ್ಥಾನಗಳಲ್ಲಿ ಒಂದೊಂದು ಬಿಂದುವನ್ನಿಡುತ್ತ ಹೋಗಬೇಕು. ಒಟ್ಟು ೪೮ ಬಿಂದುಗಳಾಗುವವು.

ಚಂದ್ರನ ಅಷ್ಟಕವರ್ಗದಲ್ಲಿ ೪೯ ಬಿಂದುಗಳು

| ಚಂದ್ರ | ಮಂ. | ಬುಧ | ಗುರು | ಶುಕ್ರ | ಶನಿ | ಲಗ್ನ | ರವಿ |
|---|---|---|---|---|---|---|---|
| ೧ | ೨ | ೧ | ೧ | ೩ | ೩ | ೩ | ೩ |
| ೩ | ೩ | ೩ | ೨ | ೪ | ೫ | ೬ | ೬ |
| ೬ | ೫ | ೪ | ೪ | ೫ | ೬ | ೧೦ | ೭ |
| ೭ | ೬ | ೫ | ೭ | ೭ | ೧೧ | ೧೧ | ೮ |
| ೧೦ | ೯ | ೭ | ೮ | ೯ | | | ೧೦ |
| ೧೧ | ೧೦ | ೮ | ೧೦ | ೧೦ | | | ೧೧ |
| | ೧೧ | ೧೦ | ೧೧ | ೧೧ | | | |
| | | ೧೧ | | | | | |

ಚಂದ್ರನಿಂದ ರವಿಯ ವರೆಗೆ ಆಯಾ ಗ್ರಹಗಳಿಂದ ಲಗ್ನದಿಂದ ಆಯಾ ಅಂಕಸೂಚಕ ಸ್ಥಾನಗಳಲ್ಲಿ ಎಣಿಸಿ ಬಿಂದುಗಳನ್ನಿಕ್ಕಬೇಕು.

ಮಂಗಳನ ಅಷ್ಟಕವರ್ಗದಲ್ಲಿ ೩೯ ಬಿಂದುಗಳು.

| ಮಂ. | ಬುಧ | ಗುರು | ಶುಕ್ರ | ಶನಿ | ಲಗ್ನ | ರವಿ | ಚಂದ್ರ |
|---|---|---|---|---|---|---|---|
| ೧ | ೩ | ೬ | ೬ | ೧ | ೧ | ೩ | ೩ |
| ೨ | ೫ | ೧೦ | ೮ | ೪ | ೩ | ೫ | ೬ |
| ೪ | ೬ | ೧೧ | ೧೧ | ೭ | ೬ | ೬ | ೧೧ |
| ೭ | ೧೧ | ೧೨ | ೧೨ | ೮ | ೧೦ | ೧೦ | |
| ೮ | | | | ೯ | ೧೧ | ೧೧ | |
| ೧೦ | | | | ೧೦ | | | |
| ೧೧ | | | | ೧೧ | | | |

ಆಯಾ ಗ್ರಹಗಳಿಂದ ಅಂಕಸೂಚಕ ಸ್ಥಾನಗಳಲ್ಲಿ ಬಿಂದುಗಳು.

ಬುಧನ ಅಷ್ಟಕವರ್ಗದಲ್ಲಿ ೫೪ ಬಿಂದುಗಳು.

| ಬುಧ | ಗುರು | ಶುಕ್ರ | ಶನಿ | ಲಗ್ನ | ರವಿ | ಚಂದ್ರ | ಮಂ. |
|---|---|---|---|---|---|---|---|
| ೧ | ೬ | ೧ | ೧ | ೧ | ೫ | ೨ | ೧ |
| ೩ | ೮ | ೨ | ೨ | ೨ | ೬ | ೪ | ೨ |
| ೫ | ೧೧ | ೩ | ೪ | ೪ | ೯ | ೬ | ೪ |
| ೬ | ೧೨ | ೪ | ೭ | ೬ | ೧೧ | ೮ | ೭ |
| ೯ | | ೫ | ೮ | ೮ | ೧೨ | ೧೦ | ೮ |
| ೧೦ | | ೮ | ೯ | ೧೦ | | ೧೧ | ೯ |
| ೧೧ | | ೯ | ೧೦ | ೧೧ | | | ೧೦ |
| ೧೨ | | ೧೧ | ೧೧ | [illegible] | | | ೧೧ |

ಆಯಾ ಗ್ರಹಗಳಿಂದ ಎಣಿಸಿ ಅಂಕಸೂಚಕ ಸ್ಥಾನಗಳಲ್ಲಿ ಬಿಂದುಗಳನ್ನಿಡಬೇಕು.

ಗುರುವಿನ ಅಷ್ಟಕವರ್ಗದಲ್ಲಿ ೫೬ ಬಿಂದುಗಳು.

| ಗುರು | ಶುಕ್ರ | ಶನಿ | ಲಗ್ನ | ರವಿ | ಚಂದ್ರ | ಮಂ. | ಬುಧ |
|---|---|---|---|---|---|---|---|
| ೧ | ೨ | ೩ | ೧ | ೧ | ೨ | ೧ | ೧ |
| ೨ | ೫ | ೫ | ೨ | ೨ | ೫ | ೨ | ೨ |
| ೩ | ೬ | ೬ | ೪ | ೩ | ೭ | ೪ | ೪ |
| ೪ | ೯ | ೧೨ | ೫ | ೪ | ೯ | ೭ | ೫ |
| ೭ | ೧೦ | | ೬ | ೭ | ೧೧ | ೮ | ೬ |
| ೮ | ೧೧ | | ೭ | ೮ | | ೧೦ | ೯ |
| ೧೦ | | | ೯ | ೯ | | ೧೧ | ೧೦ |
| ೧೧ | | | ೧೦ | ೧೦ | | | ೧೧ |
| | | | ೧೧ | ೧೧ | | | |

ಆಯಾ ಗ್ರಹದಿಂದ ಎಣಿಸಿ ಅಂಕಸೂಚಕ ಸ್ಥಾನಗಳಲ್ಲಿ ಬಿಂದುಗಳನ್ನಿಡಿರಿ.

ಶುಕ್ರನ ಅಷ್ಟಕ ವರ್ಗದಲ್ಲಿ ೫೨ ಬಿಂದುಗಳು

| ಶುಕ್ರ | ಶನಿ | ಲಗ್ನ | ರವಿ | ಚಂದ್ರ | ಮಂ. | ಬುಧ | ಗುರು |
|---|---|---|---|---|---|---|---|
| ೧ | ೩ | ೧ | ೮ | ೧ | ೩ | ೩ | ೫ |
| ೨ | ೪ | ೨ | ೧೧ | ೨ | ೪ | ೫ | ೮ |
| ೩ | ೫ | ೩ | ೧೨ | ೩ | ೬ | ೬ | ೯ |
| ೪ | ೮ | ೪ | | ೪ | ೯ | ೯ | ೧೦ |
| ೫ | ೯ | ೫ | | ೫ | ೧೧ | ೧೧ | ೧೧ |
| ೮ | ೧೦ | ೮ | | ೮ | ೧೨ | | |
| ೯ | ೧೧ | ೯ | | ೯ | | | |
| ೧೦ | | ೧೧ | | ೧೧ | | | |
| ೧೧ | | | | ೧೨ | | | |

ಶನಿಯ ಅಷ್ಟಕವರ್ಗದಲ್ಲಿ ೩೯ ಬಿಂದುಗಳು.

| ಶನಿ | ಲಗ್ನ | ರವಿ | ಚಂದ್ರ | ಮಂ. | ಬುಧ | ಗುರು | ಶುಕ್ರ |
|---|---|---|---|---|---|---|---|
| ೩ | ೧ | ೧ | ೩ | ೩ | ೬ | ೫ | ೬ |
| ೫ | ೩ | ೨ | ೬ | ೫ | ೮ | ೬ | ೧೧ |
| ೬ | ೪ | ೪ | ೧೧ | ೬ | ೯ | ೧೧ | ೧೨ |
| ೧೧ | ೬ | ೭ | | ೧೦ | ೧೦ | ೧೨ | |
| | ೧೦ | ೮ | | ೧೧ | ೧೧ | | |
| | ೧೧ | ೧೦ | | ೧೨ | ೧೨ | | |
| | | ೧೧ | | | | | |

ಅವರವರ ಅಷ್ಟಕವರ್ಗದಲ್ಲಿ ಆಯಾ ಗ್ರಹಗಳಿಂದ ಎಣಿಸಿ ಅಂಕಸೂಚಕ ಸ್ಥಾನಗಳಲ್ಲಿ ಬಿಂದುಗಳನ್ನಿಕ್ಕಬೇಕು.

ಲಗ್ನಾಷ್ಟಕವರ್ಗ ೪೯ ಬಿಂದುಗಳು.

| ರವಿ | ಚಂದ್ರ | ಮಂ. | ಬುಧ | ಗುರು | ಶುಕ್ರ | ಶನಿ | ಲಗ್ನ |
|---|---|---|---|---|---|---|---|
| ೩ | ೩ | ೧ | ೧ | ೧ | ೧ | ೧ | ೩ |
| ೪ | ೬ | ೩ | ೨ | ೨ | ೨ | ೩ | ೬ |
| ೬ | ೧೦ | ೬ | ೪ | ೪ | ೩ | ೪ | ೧೦ |
| ೧೦ | ೧೧ | ೧೦ | ೬ | ೫ | ೪ | ೬ | ೧೧ |
| ೧೧ | ೧೨ | ೧೧ | ೮ | ೬ | ೫ | ೧೦ | |
| ೧೨ | | | ೧೦ | ೭ | ೮ | ೧೧ | |
| | | | ೧೧ | ೯ | ೯ | | |
| | | | | ೧೦<br>೧೧ | | | |

# ರಾಹುವಿನ ಅಷ್ಟಕವರ್ಗ

ರಾಹುವು ಸೂರ್ಯನಿಂದ ೧–೨–೩–೫–೭–೮–೧೦ರಲ್ಲಿ ಬಿಂದುಗಳನ್ನು ಕೊಡುವನು.

ಚಂದ್ರನಿಂದ ೧ ೩-೫-೭-೮-೯-೧೦ ರಲ್ಲಿ ಬಿಂದುಗಳನ್ನು ಕೊಡುವನು.

ಮಂಗಳನಿಂದ ೨–೩–೫–೧೨ ರಲ್ಲಿ „

ಬುಧನಿಂದ ೨–೪–೭–೮–೧೨ ರಲ್ಲಿ „

## ರಾಹುವಿನ ಅಷ್ಟಕವರ್ಗ



ಗುರುವಿನಿಂದ ೧-೩-೪-೬-೮ ರಲ್ಲಿ ಬಿಂದುಗಳನ್ನಿಡಬೇಕು.

ಶುಕ್ರನಿಂದ ೬-೭-೧೧-೧೨ ರಲ್ಲಿ ,,

ಶನಿಯಿಂದ ೩-೫-೭-೧೦-೧೧-೧೨ ರಲ್ಲಿ ,,

ಲಗ್ನದಿಂದ ೩-೪-೫-೯-೧೨ ರಲ್ಲಿ ,,

ಒಟ್ಟು ೪೩ ಬಿಂದುಗಳು.

ಕನ್ಯಾರಾಶಿಯಲ್ಲಿ ರಾಹುವಿನ ಸಂಚಾರ ಅತ್ಯುತ್ತಮ ಫಲವನ್ನು ಕೊಡುವದು. ೧೯೫೯ ಮಾರ್ಚದಿಂದ ೧೯೬೦ ಅಕ್ಟೋಬರದ ವರೆಗೆ ಕನ್ಯಾದಲ್ಲಿ ರಾಹುವಿನ ಸಂಚಾರವಾಗುವದು. ವೃಶ್ಚಿಕದ ರಾಹು ಕನಿಷ್ಠ; ೧೯೫೬-೫೭ ರಲ್ಲಿ ಇತ್ತು. ಉಳಿದ ರಾಶಿಗಳಲ್ಲಿ ರಾಹು ಮಧ್ಯಮ.

## ಅಷ್ಟಕವರ್ಗದಲ್ಲಿ ಬಿಂದುಗಳನ್ನಿಡುವ ರೀತಿ :—

ಉದಾಹರಣೆ :— ರವಿಯ ಅಷ್ಟಕವರ್ಗ-




೦
೦
೦
ಬು
೧
೦
೦
೦


ಗು
೦
೦
೦
೦







ಒಟ್ಟು ೪೮ ಬಿಂದುಗಳು.

ರವಿಯ ಅಷ್ಟಕವರ್ಗದಲ್ಲಿ ೪೮ ಬಿಂದುಗಳಾಗುವವು. ಆಯಾ ಭಾವದಲ್ಲಿ ಬಿದ್ದ ಬಿಂದುಗಳನ್ನು ಎಣಿಸಿ ಭಾವದಲ್ಲಿ ಅಂಕಿಗಳನ್ನು ಇಡಬೇಕು.

ಕೋಷ್ಟಕದಲ್ಲಿ ತೋರಿಸಿದಂತೆ ಉಳಿದ ಗ್ರಹಗಳಿಂದಲೂ ಇದರಂತೆ ತಯಾರಿ ಇಟ್ಟುಕೊಳ್ಳಬೇಕು. ಇದು ಪ್ರಾಥಮಿಕ ಕಾರ್ಯ.



# ಶುಭ ಗ್ರಹದ ಮಹತ್ವದ ವರ್ಷಗಳು

**ಶುಭಖಚರ ಫಲೈಕ್ಯಾತ್ ಪ್ರಾಪ್ತವರ್ಷೇ ನೀತಾಂಶಂ,**
**ಧನತನಯ ಸುಖಾನಾಂ ಭಾಜನಂ ಸ್ಯಾನ್ಮನುಷ್ಯಃ ।**
**ಧರಣಿತನಯ ವರ್ಷೇ ಬಿಂದು ಸಂಜ್ಞಕಯೋಗೇ**
**ತನುಲಯಮಿಹ ವರ್ಷೇ ಪಾಪಗೇ ಮೃತ್ಯು ಭೀತಿಃ ।**

ಶುಭ ಗ್ರಹಗಳ ಬಿಂದು–ಸಂಯೋಗ ವರ್ಷ ಹಿತಕರ. ಪಾಪಗ್ರಹಗಳ ಬಿಂದು–ಸಂಯೋಗ ವರ್ಷ ಅಹಿತಕಾರಿ.

ಗುರುವಿನ ಅಷ್ಟಕವರ್ಗದಲ್ಲಿ ಗುರು ೩ನೆಯ ಭಾವದಲ್ಲಿರುವನು. ಅವನಿಂದ ಲಗ್ನದ ವರೆಗೆ ( ಎರಡನ್ನೂ ಒಳಗೊಂಡು ಎಣಿಸಲಾಗಿ ೪+೪+೫+೫+೪+೪+೫+೭+೩+೪+೭ = ೫೨ ನೇ ವರ್ಷ ಬರುವದು.) **ಧನತನಯ ಸುಖಾನಾಂ ಭಾಜನಂ ಸ್ಯಾನ್ಮನುಷ್ಯಃ** (ಇದರಂತೆ ಶುಕ್ರನ ಅಷ್ಟಕವರ್ಗದಲ್ಲಿ ಲಗ್ನದಿಂದ ಶುಕ್ರನ ವರೆಗಿರುವ ( ಎರಡನ್ನೂ ಒಳಗೊಂಡು ) ಬೇರಿಜು ಮಾಡಿದಲ್ಲಿ ೫೨ ಬರುವದು. ಇವೆರಡೂ ಶುಭಗ್ರಹಗಳ ಪರಿಣಾಮ ೫೨ನೆಯ ವರುಷದ ಮೇಲೆ ಆಗುವದರಿಂದ ಅದು ಉತ್ಕರ್ಷಕಾರಕ ವರ್ಷವೆಂದು ತಿಳಿಯಲು ಅಡ್ಡಿಯಿಲ್ಲ.

ಪಾಪಗ್ರಹಗಳ ಬಿಂದು ಸಂಯೋಗದಿಂದ ಅನಿಷ್ಟ **ವರ್ಷಗಳು**, ಶುಭ ಪಾಪಗ್ರಹಗಳು ಕೂಡಿ ಇರುವಲ್ಲಿ ಮಿಶ್ರಫಲ.

ಗ್ರಹಗಳ ಶುಭ ದೃಷ್ಟಿಯಿಂದ ಅತಿ ಮಹತ್ವದ ವರ್ಷಗಳು ಬರುವವು. ಇದು ಸಪ್ತಾಂಶಪದ್ಧತಿ. ಇದನ್ನು ಸಾಯನ ಪದ್ಧತಿಯಲ್ಲಿ ನೋಡುವರು. (ಫ್ಯಾಕ್‌ಲಂತರ ಪುಸ್ತಕವನ್ನು ಓದಿರಿ.)

ಮೂಲ ಕುಂಡಲಿಯಲ್ಲಿದ್ದ ಸಾಯನ ಗ್ರಹಗಳು.

| ರವಿ | ಚಂದ್ರ | ಮಂಗಳ | ಬುಧ | ಗುರು |
|---|---|---|---|---|
| ಮೀನ | ಕನ್ಯಾ | ವೃಷಭ | ಮೀನ | ಸಿಂಹ |
| ೨೫-೧೫ | ೪-೨೦ | ೧೫-೧೦ | ೧ | ೩-೪೩ |

| ಶುಕ್ರ | ಶನಿ | ನೇ | ಹ |
|---|---|---|---|
| ವೃಷಭ | ಮೀನ | ಕರ್ಕ | ಮಕರ |
| ೭ | ೨೯-೩೮ | ೧೨-೬ | ೧೬-೨೨ |

4 1/7 ಅಂಶಕ್ಕೆ ೧ ವರ್ಷ. ೩೦ ಅಂಶದಲ್ಲಿ ೭ ಭಾಗ ಮಾಡಿದರೆ 4 1/7 ಅಂಶ ಬರುವದು. ಮೇಷರಾಶಿಗೆ ೭ ವರ್ಷ, ವೃಷಭಕ್ಕೆ ೭ ವರ್ಷ. ಹೀಗೆ ಪ್ರತಿಯೊಂದು ರಾಶಿಗೆ ೭ ವರ್ಷ ಲೆಕ್ಕ ಹಿಡಿಯುವರು. ಜಾತರು ಮುಂಬೈ ಅಸೆಂಬ್ಲಿಗೆ ೧೯೩೬ ನೆಯ ಇಸವಿ ಸಪ್ಟಂಬರದಲ್ಲಿ ಸದಸ್ಯರಾದರು. ಇದು ೨೯ ನೆಯ ವರ್ಷ, ಗುರು ಸಿಂಹದಲ್ಲಿರುವನು. ಆರಂಭದಲ್ಲಿ ೪ನೇ ಅಂಶದಲ್ಲಿ. ೪ ರಾಶಿಗೆ × ೭ = ೨೮ ಸಿಂಹ 1/7 ಅಂಶಕ್ಕೆ ೧ ವರ್ಷ; ೨೯ ನೇ ವರುಷ ಬರುವದು. **ವಕ್ರಿಣಸ್ತು ಮಹಾವೀರ್ಯಾಃ ಶುಭಾಃ—ರಾಜ್ಯಪ್ರದಾ ಗ್ರಹಾಃ**

ಗುರು ವಕ್ರಿ ಇದ್ದು ಬಾದಕಾಧಿರಾಶಿ ( ಸಿಂಹ ) ಯಲ್ಲಿರುವನು. ಕಾರಣ ರಾಜ್ಯಸಭೆಯ ಸದಸ್ಯರಾದರು. ಇದರಂತೆ ಧನುರಾಶಿಯ ಆರಂಭದಲ್ಲಿ ಗುರುವಿನ ತ್ರಿಕೋಣ ದೃಷ್ಟಿ ಬೀಳುವದು. ೮×೭=೫೬+೧=೫೭ ನೇ ವರ್ಷ ಮಹತ್ವದ ಪ್ರಾಪ್ತಿ, ಗೌರವಗಳು. ರಾಜಕೀಯ ಕಾರ್ಯಗಳಿಂದ ಗೌರವ. ರವಿಯ ಶುಭದೃಷ್ಟಿ. ವೃಶ್ಚಿಕ ೨೫ ನೆಯ ಅಂಶದಲ್ಲಿ ಶನಿಯ ಶುಭದೃಷ್ಟಿಯು ೩೦ ನೇ ಅಂಶದಲ್ಲಿ ಬೀಳುವದು. ಲೆಕ್ಕದಂತೆ ೫೫-೫೬ ನೆಯ ವರುಷ ಬರುವವು. ರವಿ-ಶನಿಗಳು ಸಾಯನದಲ್ಲಿ ದಶಮದಲ್ಲಿರುವರು. ಅಧಿಕಾರ, ಮಾನ, ಗೌರವಗಳನ್ನು ಕೊಡುವರು.

**೫೩ ನೆಯ ವರ್ಷಕ್ಕೆ ಹರ್ಷಲನ ತ್ರಿರೇಕಾದಶ ಆಕಸ್ಮಿಕ ಉನ್ನತಿಯ ಸಂದರ್ಭಗಳು.**

ಮಂಗಳನ ಶುಭದೃಷ್ಟಿ ಕನ್ಯಾ ೧೫ ಅಂಶಕ್ಕೆ ಬೀಳುವದು. ೧೯೪೬ ನೆಯ ಇಸವಿಯಲ್ಲಿ ಪುನಃ ಆರಿಸಿಬಂದು ರಾಜಕೀಯ ಸಭೆಯ ಸದಸ್ಯ-ರಾದರು. ಇದು ಜಾತರ ೭ × ೫ = ೩೫ + ೩ = ೩೮ ನೇ ವರ್ಷ ಬರು-ವದು. ಮಂಗಳನ ದೃಷ್ಟಿಯ ಆರಂಭ, ಮಂಗಳ, ಗುರು, ಹರ್ಷಲ, ರವಿ ಇವುಗಳ ಶುಭದೃಷ್ಟಿ ಮಾನ, ಗೌರವ, ಅಧಿಕಾರಗಳನ್ನು ಕೊಡು-ವದು— ೧೯೫೩ ಅಗಸ್ಟದಲ್ಲಿ ರಾಜೀನಾಮೆ ಕೊಟ್ಟರು. ೪೬ ವರ್ಷಕ್ಕೆ ಇಲ್ಲಿ ಹರ್ಶಲನ ಕೇಂದ್ರ ಅಶುಭ ದೃಷ್ಟಿ ಬೀಳುವದು. ಆಕಸ್ಮಿಕ ಘಟನೆ. ೬೭ನೆಯ ವರ್ಷ ಹರ್ಶಲ ನೆಪ್ಚೂನರ ಪ್ರತಿಯೋಗವಾಗುವದು. ಶಾರೀರಿಕ ಅಸ್ವಾಸ್ಥ್ಯ ತೊಂದರೆಗಳು. ಅಷ್ಟಕವರ್ಗ ಪದ್ಧತಿಯಲ್ಲಿ ತೂಗಿ ನೋಡಿದರೆ ಇದರಲ್ಲಿ ಬಹಳಷ್ಟು ಸತ್ಯಾಂಶವು ಇರುವದೆಂದು ಕಂಡುಬರುವದು. ಈ ಸತ್ಯಾಂಶವನ್ನು ವಾಚಕರಿಗೆ ಮನಗಾಣಿಸುವದಕ್ಕಾಗಿ ಜ್ಯೋತಿಷ ಶಾಸ್ತ್ರಜ್ಞರ ಇತರ ಮಾನ್ಯವಾದ ಕಾಲನಿರ್ಣಯದ ಪದ್ಧತಿಗಳೊಡನೆ ತುಲನೆ ಮಾಡಿ ನೋಡುವದಕ್ಕಾಗಿ ಉಲ್ಲೇಖ ಮಾಡಿದೆ ಎಂಬುದನ್ನು ವಾಚಕರು ಅರಿತು ನೋಡಬೇಕು. ೧೯೫೧ ಜನೇವರಿಯಲ್ಲಿ ಪುನಃ ರಾಜಸಭೆಯ ಸದಸ್ಯ-ರಾದರು. ಇದು ೪೩ ನೇ ವರ್ಷ ೭ × ೬ = ೪೨ + ೧ = ೪೩ ನೆಯ ವರ್ಷ ಸಿಂಹರಾಶಿಯ ಆರಂಭದಲ್ಲಿದ್ದ ಗುರುವಿನ ತ್ರಿರೇಕಾದಶ ಶುಭದೃಷ್ಟಿ ತುಲೆಯ ಆರಂಭದಲ್ಲಿ ಬೀಳುವದು. ಇದು ಸಪ್ತಾಂಶ ಪದ್ಧತಿಯಲ್ಲಿ ಸತ್ಯ ವನ್ನು ತೋರಿಸುವದು.

— ಇತಿಶಂ —

# ಸರ್ವಾಷ್ಟಕವರ್ಗ

ವೈಯಕ್ತಿಕ ಅಷ್ಟಕವರ್ಗದಲ್ಲಿಯ ಬಿಂದುಗಳನ್ನು ಕೂಡಿಸಲು ಸರ್ವಾ-ಷ್ಟಕವರ್ಗವಾಗುವದು. (ಲಗ್ನಾಷ್ಟಕವರ್ಗವನ್ನು ಬಿಟ್ಟು)




ಒಟ್ಟು ೩೩೭ ಬಿಂದುಗಳು.

ತ್ರಿಂಶಾಧಿಕ ಫಲಾ ಯೇಸ್ಯುಃ ರಾಶಯ ಸ್ತೇ ಶುಭ ಪ್ರದಾಃ॥
ಪಂಚವಿಂಶಾತ್ ಪರಂ ಮಧ್ಯಂ ಕಷ್ಟಂ ತಸ್ಮಾದಧಃ ಫಲಂ ॥

ಫಲದೀಪಿಕೆ—

೩೦ ಕ್ಕಿಂತ ಹೆಚ್ಚು ಬಿಂದು ಬಿದ್ದ ರಾಶಿಗಳು ಉತ್ತಮ ಫಲ ಕೊಡುವವು. ೨೫ ಕ್ಕಿಂತ ಹೆಚ್ಚು ಬಿದ್ದಿದ್ದರೆ ಮಧ್ಯಮ ಫಲ. ಅದಕ್ಕಿಂತ ಕಡಿಮೆ ಬಿದ್ದಿದ್ದರೆ ಕನಿಷ್ಠ ಫಲ. ಇಲ್ಲಿ ಲಗ್ನ (ಶರೀರ ಸ್ಥಿತಿ) – ಧನ- ೬ ನೇ ಭಾವ (ಆರೋಗ್ಯ) ಭಾಗ್ಯ ಕರ್ಮ (ಮಾನ ಗೌರವ) ಈ ಭಾವ ಗಳಲ್ಲಿ ೩೦ ಕ್ಕಿಂತ ಹೆಚ್ಚು ಬಿಂದುಗಳಿರುವವು. ಶಾರೀರಿಕ ಸುಖ, ಆರ್ಥಿಕ ಸುಖ, ಆರೋಗ್ಯ – ಭಾಗ್ಯ. (ದೈವಾನುಕೂಲ್ಯ) ಕರ್ಮ (ಮಾನ-ಗೌರವ) ಈ ಭಾವಗಳು ಬಲಿಷ್ಠವಾಗಿರುವವು.

ಸಮುದಾಯಾಷ್ಟಕವರ್ಗದಿಂದ ಭಾವಬಲ ತಿಳಿಯುವದು. ೨೮ ಬಿಂದು ಗಳು ಅಥವಾ ಅದಕ್ಕಿಂತ ಹೆಚ್ಚು ಬಿಂದುಗಳು ಬಿದ್ದರೆ ಭಾವ ಬಲಿಷ್ಠ. ಲಗ್ನ–ಶರೀರಸೌಖ್ಯ. ೩೨, ಬಲಿಷ್ಠವಿರುವದು. ಧನ (ಆರ್ಥಿಕ ಕೌಟುಂಬಿಕ) ೩೨, ಬಲಿಷ್ಠವಿರುವದು. ೩ ನೆಯ ಭಾವ, (ನೆರೆ ಸಮೀಪದ ಬಂಧುಗಳು, ಪ್ರವಾಸ) ೨೮ ಬಲಿಷ್ಠವದೆ. ೪ ಭಾವ– ಸಾಮಾನ್ಯ ೨೨ ಪಂಚಮ- ಸುತ ಸಾಧಾರಣ, ೨೨. ೬ ನೆಯ ಭಾವ ಆರೋಗ್ಯ ೩೩, ಬಲಿಷ್ಠವದೆ. ಸಪ್ತಮ ೨೫, ಸಾಧಾರಣ ಬಲಿಷ್ಠ. ೮, ಮೃತ್ಯು ಬಲಿಷ್ಠವಿರುವದು. ನವಮ, ಭಾಗ್ಯ ೩೪ ಅತ್ಯಂತ ಬಲಿಷ್ಠ. ಧರ್ಮ. ೧೦ ಮಾನ-ಗೌರವ. ೩೧ ಬಲಿಷ್ಠವಿರುವದು. ಏಕಾದಶ, ಲಾಭ. ೨೩ ಸಾಧಾರಣ. ದ್ವಾದಶ, ೨೨ ಸಾಧಾರಣ. ಬುಧನು ದಶಮದಲ್ಲಿರುವನು. ಅವನಿಗೆ ಅಷ್ಟಕವರ್ಗದಲ್ಲಿ ೬ ಬಿಂದುಗಳು ಬಿದ್ದಿರುವವು. ೪ ಕ್ಕಿಂತ ಹೆಚ್ಚು ಬಿದ್ದರೆ ಬಲಿಷ್ಠ. ಶನಿಗೆ ೪ ಬಿಂದುಗಳು ಬಿದ್ದಿರುವವು. ಕಾರಣ ಬುಧನ ಅಂತರ್ದಶೆಯಲ್ಲಿ ದಶಮ ಭಾವಕ್ಕೆ ಬಲ (ಮಾನ, ಅಧಿಕಾರ, ಗೌರವಗಳ ಪ್ರಾಪ್ತಿ.)

ಸಮುದಾಯಾಷ್ಟಕವರ್ಗೇ ಜನ್ಮನಿ ಲಗ್ನೇ ಭವಾ
ತದಷ್ಟಮುಃ ।
ಅಧಿಕ ಸಮಾಲ್ಪಫಲೇಸ್ಯುಃ ದೀರ್ಘ ಸಮಾಲ್ಪಾಯುಷಃ
ಕ್ರಮಾನ್ ಮನುಜಾಃ ॥

ಅಷ್ಟಮಕ್ಕಿಂತ ಲಗ್ನದಲ್ಲಿ, ಚಂದ್ರಾಷ್ಟಕಕ್ಕಿಂತ ಚಂದ್ರ ಲಗ್ನದಲ್ಲಿ ಹೆಚ್ಚು ಬಿಂದುಗಳು ಬಿದ್ದಿದ್ದರೆ—ದೀರ್ಘಾಯು, ಸಮಬಿದ್ದಿದ್ದರೆ ಮಧ್ಯಾಯು, ಕಡಿಮೆ ಬಿದ್ದಿದ್ದರೆ ಅಲ್ಪಾಯು. ಇಲ್ಲಿ ಲಗ್ನದಲ್ಲಿ ಮತ್ತು ಲಗ್ನದಿಂದ ಅಷ್ಟಮದಲ್ಲಿ ಸಮಾನ ಬಿಂದುಗಳಿವೆ. ಮಧ್ಯಮಾಯು; ಸುಮಾರು ೭೦ ರ ವರೆಗೆ ಆಯು.

ಶುಭಗ್ರಹಾಣಾಂ ಸಂಯೋಗಾತ್ ಸಮಾನಾಚ್ಚೇ
ಶುಭಂ ಭವೇತ್-ಪುತ್ರವಿತ್ತ ಸುಖಾದೀನಿ ಲಭತೇ
ನಾತ್ರ ಸಂಶಯಃ ।
ಲಗ್ನಾದಿಶನ್ಯಂತಗತಂ ಶುರಂಗ್ಯೈಃ । ಸಂಗಣ್ಯ ತಾರಾ
ಹೃತ ಲಬ್ಧಯಾತೇ । ದಿವ್ಯಾದಿ ಪಾಪಯದಿ
ಕೋಣಗೇವಾ ।
ರೋಗಾದಿ ಪೀಡಾ ವಿಪುಲಾ ನರಾಣಾಂ । ಮಂದಾದಿ
ಲಗ್ನಾಂತ
ಫಲಂ ಚ ತದ್ವತ್ । ಲಗ್ನಾಂತ ಮಾರಾತ್ ಉದಯಾತ್
ಕುಜಾಂತಂ ।
ಶುಭೈಕ್ಯ ಸಂಖ್ಯಾಗತ ತಾರಕಾಯಾಂ ಶುಭಗ್ರಹೇ
ಸೌಖ್ಯಫಲಂ ವದಂತಿ ।

ಲಗ್ನದಿಂದ ಗುರುವಿನ ವರೆಗೆ; ಗುರುವಿನಿಂದ ಲಗ್ನದ ವರೆಗೆ ಬಿಂದು-ಗಳನ್ನು ಎಣಿಸಿ ಕೂಡಿಸಿ ಪ್ರತ್ಯೇಕವಾಗಿ ೨೭ ರಿಂದ ಭಾಗಿಸಬೇಕು. ಉಳಿದ ಸಂಖ್ಯಾಕ ನಕ್ಷತ್ರದಲ್ಲಿ ಶುಭಗ್ರಹದ ಸಂಚಾರವಿದ್ದಾಗ ಶುಭ ಫಲ.

ಉದಾ:—

ಲಗ್ನದಿಂದ ಗುರುವಿನ ವರೆಗೆ.

೩೨ + ೩೨ + ೨೮ = ೯೨. ೨೭ ) ೯೨ ( ೩
೮೧
——
೧೧

೧೧ನೇ ನಕ್ಷತ್ರ ಪೂರ್ವಾ ನಕ್ಷತ್ರ ಅಥವಾ ಅದರ ತ್ರಿಕೋನ ನಕ್ಷತ್ರ-ದಲ್ಲಿ ಶುಭ ಗ್ರಹದ ಸಂಚಾರ ಶುಭ ಫಲ ಕೊಡುವದು. ೧೯೬೪ ನೆಯ ಇಸವಿಯಲ್ಲಿ ಭರಣಿಯಲ್ಲಿ ೧೯೬೮ ನೆಯ ಇಸವಿಯಲ್ಲಿ ಪೂರ್ವಾದಲ್ಲಿ ಗುರು ಸಂಚರಿಸುವನು. ಉಚ್ಚ, ಗುರು (ಮೂಲತಃ) ಮಾನ ಗೌರವ ಧನಗಳನ್ನು ಕೊಡುವನು.

ಇದರಂತೆ ಗುರುವಿನಿಂದ ಲಗ್ನದ ವರೆಗೆ.

೨೮ ೨೭ ) ೩೦೫ ( ೧೧
೨೨ ೨೭
೨೨ ——
೩೩ ೩೫
೨೫ ೨೭
೩೨ ——
೩೪ ೮ ೩ ನೆಯ ನಕ್ಷತ್ರ ಪುಷ್ಯ
೩೧ ಪುಷ್ಯ ಅನುರಾಧಾ ಉತ್ತರಾ ಭಾದ್ರ. ೧೯೫೯
೨೩ ನೆಯ ಇಸವಿಯಲ್ಲಿ ಗುರುವಿನ ಸಂಚಾರ ಅನುರಾಧಾ
೨೩ ದಲ್ಲಿ ಆಗುವದು.
೩೨
——
೩೦೫

ಶುಕ್ರನಿಂದ ಲಗ್ನದ ವರೆಗೆ.

೨೫ + ೩೨ = ೫೭ ನೆಯ ವರುಷ ಶುಭ. ಶುಭ ಗ್ರಹಾಣಾಂ
೨೭ ) ೫೭ ( ೨ ಸಂಯೋಗಾತ್ ಸಮಾನಾಬ್ದೇ ಶುಭಂ
೫೪ ಭವೇತ್ ।
——
೩

ಅಶ್ವಿನೀ ಆಶ್ಲೇಷಾ ರೇವತಿಯಲ್ಲಿ ಗುರುವಿನ ಸಂಚಾರ ಹಿತಕರ. ೧೯೬೩ ರ ಮಧ್ಯದಲ್ಲಿ ಗುರುವಿನ ಸಂಚಾರ ರೇವತಿಯಲ್ಲಿ ಆಗಿತ್ತು.

ಲಗ್ನದಿಂದ ಶುಕ್ರನ ವರೆಗೆ ೩೩೭ ಬಿಂದುಗಳು. ೭ ರಿಂದ ಗುಣಿಸಿ ೨೭ ರಿಂದ ಭಾಗಿಸಿ ಶೇಷ ನಕ್ಷತ್ರ ತೆಗೆಯಬೇಕು.

```
        ೩೩೭
         ×೭
     --------
೨೭ ) ೨೩೫೯ ( ೮೭
     ೨೧೬
     ----
      ೧೯೯
      ೧೮೯
      ----
       ೧೦
```

೧೦ ನೇ ನಕ್ಷತ್ರ ಮಘಾ.

ತ್ರಿಕೋಣ ನಕ್ಷತ್ರ ಮೂಲಾ. ೧೯೬೦ ನೆಯ ಇಸವಿಯಲ್ಲಿ ಮೂಲಾದಲ್ಲಿ ಗುರುವಿನ ಸಂಚಾರವಿತ್ತು. ಇದು ಶುಭ ಫಲವನ್ನು ಕೊಡುವದು.

ಬುಧನಿಂದ ಲಗ್ನದ ವರೆಗೆ.

```
  ೩೧
  ೨೩
  ೨೩
  ೩೨
 ----
 ೧೦೯
  ×೭
 ----
 ೭೬೩
```

೨೭ ) ೭೬೩ ( ೨೮
　　೫೪
　　——
　　೨೨೩
　　೨೧೬　　೭ನೇ ನಕ್ಷತ್ರ ಪುನರ್ವಸು, ಪೂರ್ವಾಭಾದ್ರಪದ,
　　——
　　　೭　　ವಿಶಾಖಾ ನಕ್ಷತ್ರದಲ್ಲಿ ಗುರುವಿನ ಸಂಚಾರ ಹಿತಕರ.

ಶುಕ್ರನಿಂದ ಲಗ್ನದ ವರೆಗೆ.

೨೩ + ೩೨ = ೫೫ ನೆಯ ವರ್ಷ ಅಭ್ಯುದಯಕಾರಕ ಬುಧನು ಮಾನಸ್ಥಾನದಲ್ಲಿರುವನು.

ಲಗ್ನದಿಂದ ಚಂದ್ರನ ವರೆಗೆ.

೩೨ + ೩೨ + ೨೮ + ೨೨ = ೧೧೪
　　　　　　　　　　　×೭
　　　　　　　　　————
೨೯ ನೇ ವರುಷ ಅಸೆಂಬ್ಲಿ　　೨೭ ) ೭೯೮ ( ೨೯
ಮೆಂಬರರು ಆದರು.　　　　　　೫೪
　　　　　　　　　　　——
　　　　　　　　　　　೨೫೮
　　　　　　　　　　　೨೪೩
　　　　　　　　　　　——
　　　　　　　　　　　೧೫ ನೆಯ ನಕ್ಷತ್ರ ಸ್ವಾತಿ

ಸ್ವಾತಿಯಲ್ಲಿ ಅಥವಾ ಅದರ ತ್ರಿಕೋಣದಲ್ಲಿ ಶತತಾರಾ ಹಿತಪ್ರದ ೧೯೬೨ ನೆಯ ಇಸವಿಯಲ್ಲಿ ಗುರುವಿನ ಸಂಚಾರ ಶತತಾರಾದಲ್ಲಿ ಆಗಿತ್ತು.

ಲಗ್ನದಿಂದ ಶನಿಯ ವರೆಗೆ. ೩೩೭ − ೨೩ = ೩೧೪.

೩೧೪ × ೭ = ೨೧೯೮

೨೭ ) ೨೧೯೮ ( ೮೧
೨೧೬
———
೩೮
೨೭
———
೧೧

೧೧ ನೇ ನಕ್ಷತ್ರ ಪೂರ್ವಾ. ಪೂರ್ವಾ, ಪೂರ್ವಾಷಾಢಾ, ಭರಣಿ ನಕ್ಷತ್ರ ಶನಿಯಸಂಚಾರ ಪೀಡಾಕಾರಿ.

ಸರ್ವಾಷ್ಟಕ ವರ್ಗದಲ್ಲಿ, ಕೇಂದ್ರದಲ್ಲಿ ೧೧೦ ಬಿಂದುಗಳು.

ಪಣಫರದಲ್ಲಿ ೧೦೮ ಬಿಂದುಗಳು.

ಆಪೋಕ್ಲಿಮದಲ್ಲಿ ೧೧೮. ಆದ್ದರಿಂದ ವಾರ್ಧಕ್ಯದಲ್ಲಿ ಹೆಚ್ಚು ಸೌಖ್ಯ ಗೌರವ.

ಕೇಂದ್ರ (ಬಾಲ್ಯ) ಪಣಫರ (ಮಧ್ಯ) ಆಪೋಕ್ಲಿಮ (ವಾರ್ಧಕ್ಯ).

## ಆಧಾರಭೂತ ಪದ್ಯ

ಕೇಂದ್ರಸ್ಥಾಂಕಂ ಪಣಫರಗತಮಾಪೋಕ್ಲಿಮಗತಂ ಯುಕ್ತ್ವಾ ।
ತೇಷಾಮಧಿಕಾಲ್ಪತ್ವಾತ್ ಪ್ರಥಮಾದಿವಯಃ ಶುಭಾಶುಭಂ ಜ್ಞೇಯಂ ॥

## ಯಶಸ್ಕರ ದಿಕ್ ಸೂಚನೆ

ಪ್ರಾದಕ್ಷಿಣ್ಯಾದಿಭಾನಾಂ ಸಕಲ ಫಲಯುತಿಂ ದಿಕ್ಚತುಷ್ಕೃತ್ಸ್ವೇಣ ।
ಕೃತ್ವಾ ತದ್ಭಾಗವತೋ ಯಃ ಸಮಧಿಕ ಫಲತಃ ಶೋಭನಂ
ಹಾನಿವ ಲ್ಪಾತ್ ।
ಸೌಮ್ಯಾಃ ಸ್ತೋತ್ಪನ್ನ ಸ್ವಗೇಹೋದಿತಖಚರಯುತೇ ದಿಗ್ವಿಭಾಗೇ
ಸ್ವಕಾರ್ಯಂ ।
ವಿತ್ತೇ ಶಾಲಾಸು ವಿತ್ತಂ ನೃಪತಿ ಸತಿಗತ ದಿಗ್ವಿಭಾಗೇ ದೇಹನಾಶಃ ॥

**ಭಾವಗಳು ಬಿಂದು ಸಂಖ್ಯೆ**

**East** — ೧-೧೨-೧೧ = ೩೨+೨೩+೨೭=೭೮.
**South**—೧೦- ೯- ೮ = ೩೧+೩೪+೩೨=೯೭.
**West** — ೭- ೬- ೫ = ೨೫+೩೩+೨೨=೮೦
**North**— ೪- ೩- ೨ = ೨೨+೨೮+೩೨=೮೨.

ದಕ್ಷಿಣ ದಿಕ್ಕಿನಲ್ಲಿ ಹೆಚ್ಚಿಗೆ ಯಶಸ್ಸು ಸಿಕ್ಕುವದು. ಧನಾಧಿಪತಿಯ ದಿಕ್ಕು ದಕ್ಷಿಣಕ್ಕಿರುವದು. ಅಷ್ಟಮಾಧಿಪತಿಯ ದಿಕ್ಕು ಉತ್ತರದಲ್ಲಿರುವದು.

ಶ್ರೀಮಾನರ್ಥ ವಿಲಗ್ನ ಬಂಧು ನವಮವ್ಯೋಮಾಯಗಾಶ್ಚಾನ್ವಯೇ ।
ಪಿತ್ರ್ಯಾಯಾದಧಿಕೇ ವ್ಯಯಾಧಿಕ ಇತಶ್ಚೋನೇ ಸಮೇ ಸ್ಯಾತ್ ಸಮಃ
ಶೀರ್ಣೋನೇ ವ್ಯಯ ಮೃತ್ಯು ಷಷ್ಠ ಭವನಸ್ಥಾಶ್ಚಾನ್ವಯೇಸ್ಯಾ
ನ್ವಯಾತ್ ।
ಆಯಸ್ಯಾಧಿಕತಾಧಿಕೇ ಖಲು ತತೋ ಭೂಯಾಸಿಹಾ ಯಾನ್ವಯಃ ॥

| | | |
|---|---|---|
| ಲಗ್ನ | ೩೨ | ಈ ಭಾವಗಳಲ್ಲಿ ೧೬೪ ಕ್ಕಿಂತ ಹೆಚ್ಚು ಬಿಂದು- |
| ಧನ | ೩೨ | ಗಳಾದಲ್ಲಿ ಮಾನವನು ಶ್ರೀಮಂತನಿರುವನು. |
| ಚತುರ್ಥ | ೨೨ | ೧೬೪ ಕ್ಕಿಂತ ಕಡಿಮೆಯಾದಲ್ಲಿ ಸಾಮಾನ್ಯ. ಇಲ್ಲಿ |
| ನವಮ | ೩೪ | ಉದಾಹೃತ ಕುಂಡಲಿಯಲ್ಲಿ ೧೬೪ ಕ್ಕಿಂತ ೧೦ |
| ದಶಮ | ೩೧ | ಬಿಂದುಗಳು ಹೆಚ್ಚಿಗಿರುವವು. ಜಾತರು ಸ್ಥಿತಿ- |
| ಏಕಾದಶ | ೨೩ | ವಂತರು ಇರುವರು. |
| | ೧೭೪ | |

ಇದರಂತೆ ೬-೮-೧೨ ರಲ್ಲಿಯ ಬಿಂದುಗಳನ್ನು ಕೂಡಿಸಬೇಕು. ೩೩+೩೨+೨೩=೮೮ ಸಂಖ್ಯೆ ೭೬ ಕ್ಕಿಂತ ಕಡಿಮೆಯಾದರೆ ಖರ್ಚು ಕಡಿಮೆ. ಹೆಚ್ಚಾದರೆ ಖರ್ಚು ಹೆಚ್ಚಿಗಿರುವದು.

ಲಗ್ನಾಂಬ್ವಾತ್ಮಜ ಕಾಮ ಧರ್ಮ ಗಗನಸ್ಥಾಕ್ಷಣೆ ಸಂಯೋಜಯೇತ್ ।
ಅಂತರ್ಭಾಗ ಇಹಾಯಮತ್ರ ಫಲಬಾಹುಲ್ಯೇ ಮನಸ್ತುಷ್ಟತಾ ।
ವಿದ್ಯಾಜ್ಞಾನ ಸುಕರ್ಮ ದಾನ ನಿರತಿಶ್ಚಾನ್ಯಸ್ಥತಾಶ್ಚಾನ್ವಯೇ ।
ಭಾಗೋನ್ಯತ್ರಫಲೇ ಧಿಕೇ ಸತಿ ಮನಃ ಪೀಡಾ ಚ ದಂಭಾಧಿಕಂ ॥

೧-೪-೫-೭-೯-೧೦ ಭಾವಗಳ ಬಿಂದುಗಳನ್ನು ಕೂಡಿಸಬೇಕು. (೩೨+೨೨+೨೨+೨೫+೩೪+೩೧=೧೬೬). ಈ ಬಿಂದುಗಳು ೧೬೪ ಕ್ಕಿಂತ ಹೆಚ್ಚು ಇರುವಲ್ಲಿ ಮನಸ್ತುಷ್ಟಿ ಇರುವದು. ವಿದ್ಯಾದಾನ ಮೊದಲಾದ ಸತ್ಕರ್ಮಗಳು ಅವನಿಂದ ಜರುಗುವವು. (Learning, content-ment) ಲಭಿಸುವವು. ಕಡಿಮೆ ಇದ್ದರೆ ತೊಂದರೆಗಳನ್ನು, ಕಾಪಟ್ಯವನ್ನು ಅನುಭವಿಸಬೇಕಾಗುವದು. ಉದಾಹೃತ ಕುಂಡಲಿಯಲ್ಲಿ ೧೬೪ ಕ್ಕಿಂತ ಹೆಚ್ಚು ಬಿಂದುಗಳಿರುವವು.

೨ ) ೩೩೭ ( ೧೬೮ ಇನರಸೆಲ್ಫ್ ಔಟರಸೆಲ್ಫ್
೨ ೧೬೬ ೧೬೮
—— ಅಂತರ್ ದೃಷ್ಟಿ ಬಹಿರಂಗ ದೃಷ್ಟಿ
೧೩ ತೃಪ್ತಿ, ತಿಳಿವಳಿಕೆ, ವಿದ್ಯಾ ಸಮತೂಕದಲ್ಲಿರುವವು.
೧೨
——
೧

ಮೀನಾದ್ಯಂ ಮಿಥುನಾಂತಕಂ ಪ್ರಥಮಕಂ ಪ್ರೋಕ್ತಂ ವಯಃ
ಕ್ರಾಕ್ರನ್ಯೈಃ ।
ಕರ್ಕಾದ್ಯಂ ವಣಿಜಾಂತಕಂ ತರುಣತಾಸಂಜ್ಞಂ ಚ ಮಧ್ಯಂ ಬುಧಃ ।
ಕುಂಭಾಂತಂ ಸ್ಥವಿರಾಹ್ವಯಂ ಚ ಬಹುಭಿಃ ಯತ್ರ ತ್ಫಲೈಃ
ಸಂಯುತಂ ।
ತತ್ ಸೌಖ್ಯಾರ್ಥವಿಶೇಷಕಂ ಬಲಯುತೇ ನ್ಯೈತತ್ ವಿಶೇಷಾಚ್ಛುಭಂ ॥

ಮೀನದಿಂದ ಮಿಥುನದ ವರೆಗೆ, ಕರ್ಕದಿಂದ ತುಲಾದ ವರೆಗೆ, ವೃಶ್ಚಿಕದಿಂದ ಕುಂಭದ ವರೆಗೆ ಬಿಂದುಗಳನ್ನು ಕೂಡಿಸಿ ಬಾಲ್ಯ-ಮಧ್ಯ-

ವಾರ್ಧಕ್ಯದಲ್ಲಿ ಸುಖ–ದುಃಖಗಳನ್ನು ಹೇಳಬೇಕು.

ಮೀನದಿಂದ ಮಿಥುನ— ೨೩+೨೩+೩೨+೩೨=೧೧೦.

ಕರ್ಕದಿಂದ ತುಲಾ — ೨೮+೨೨+೨೨+೩೩=೧೦೫.

ವೃಶ್ಚಿಕದಿಂದ ಕುಂಭ— ೨೫+೩೨ ೩೪+೩೧=೧೨೨.

ಆಯುಷ್ಯದ ಕಡೆಯ ಭಾಗದಲ್ಲಿ ( ವಾರ್ಧಕ್ಯ ) ೧೨೨ ಬಿಂದುಗಳು ಇರುವವು. ಹೆಚ್ಚು ಸೌಖ್ಯ.

ಯಾವದ್ಬಿಂದುರ್ಲಗ್ನಗಸ್ತಾವದೀಯು ಸಂಖ್ಯಾತೀತೇ
ವತ್ಸರೇ
ರಾಜಯಾನಂ । ವಿತ್ತಂ ಪುತ್ರಂ ಚಾತಿವಿದ್ಯಾಮುಪೇತಿ
ಜಾತಃ ಸಂಗತ್ ಯೋಗಶಾಲೀ ನರಶ್ರೇಶ್ /

ಧನ, ಮಾನ, ಗೌರವ, ವಾಹನ, ಪದವಿ ಮೊದಲಾದವುಗಳನ್ನು ಲಗ್ನಗತ ಬಿಂದು, ಸಂಖ್ಯಾಗತ ವರ್ಷಗಳ ನಂತರ ಹೊಂದುವನು. ಅಂತಹ ಯೋಗಗಳು ಮೂಲ ಕುಂಡಲಿಯಲ್ಲಿ ಬೇಕು. ಲಗ್ನ, ಲಾಭಗಳಲ್ಲಿ ೩೦ ಕ್ಕಿಂತ ಹೆಚ್ಚು ಬಿಂದುಗಳಿದ್ದರೆ ಧನ, ರಾಜಮರ್ಯಾದೆ.

ಉದಾಹೃತ ಕುಂಡಲಿಯಲ್ಲಿ ಜನ್ಮಕಾಲದಲ್ಲಿ ಮಘಾ ನಕ್ಷತ್ರವದೆ. ಕೇತುದಶಾ ೧೬ ದಿನಸಗಳು ಮಾತ್ರ ಭೋಗ್ಯ.

| | ಮಹಾದಶೆ | | | | ಅಂತರ್ದಶೆ | | |
|---|---|---|---|---|---|---|---|
| | ವ. | ತಿ. | ದಿ. | | ವ. | ತಿ. | ದಿ. |
| ಕೇತು | ೦ – | ೦ – | ೧೬ | | ೪೩ – | ೦ – | ೧೬ |
| ಶುಕ್ರ | ೨೦ – | ೦ – | ೦ | ರಾಹು | ೨ – | ೮ – | ೧೨ |
| | ೨೦ – | ೦ – | ೧೬ | | ೪೫ – | ೮ – | ೨೮ |

(ಮುಂದಿನ ಪುಟಕ್ಕೆ)

| | | | |
|---|---|---|---|
| ರವಿ | ೬ – ೦ – ೦ | ಗುರು | ೩ – ೪ – ೩೪ |
| ಚಂದ್ರ | ೧೦ – ೦ – ೦ | | |
| | | | ೪೮ – ೧ – ೩೫ |
| | ೩೬ – ೦ – ೧೬ | ಶನಿ | ೩ – ೧೦ – ೬ |
| ಮಂಗಳ | ೭ – ೦ – ೦ | | |
| | | | ೫೦ – ೧೧ – ೩೮ |
| | ೪೩ – ೦ – ೧೬ | ಬುಧ | ೩ – ೬ – ೧೮ |
| ರಾಹು | ೧೮ – ೦ – ೦ | | |
| | | | ೫೩ – ೬ – ೧೬ |
| | ೬೧ – ೦ – ೧೬ | ಕೇತು | ೧ – ೦ – ೧೮ |
| ಗುರು | ೧೬ – ೦ – ೦ | | |
| | | | ೫೪ – ೭ – ೪ |
| | | ಶುಕ್ರ | ೩ – ೦ – ೦ |
| | | | ೫೭ – ೭ – ೪ |

ಜಾತಕರಿಗೆ ೫೩ ನೆಯ ವರ್ಷದಿಂದ ಜೈಮಿನಿದಶೆಯೂ ಅನುಕೂಲ. ಪರಾಶರ ದಶೆಯೂ ಅನುಕೂಲ. ಆಗ ಜಾತರು ಕರ್ಮಸ್ಥಾನದ (೧೦) ಗೌರವವನ್ನು ಕಾಣುವರು.

೧೯೫೫ ಮಾರ್ಚ ೧೪ನೆಯ ತಾರೀಖಿಗೆ ಬುಧನ ಅಂತರ್ದಶೆ ಸುರು ಆಗಿತ್ತು. ಇದು ಮುಂದೆ ೩-ವ. ೬-ತಿಂ. ೧೬- ದಿವಸ ಇತ್ತು. ಬುಧನು ೬ ಬಿಂದುಗಳಿಂದ ಕೂಡಿ ದಶಮದಲ್ಲಿರುವನು. ದಶಾಧಿಪತಿಗೂ ಅವನಿಗೂ ತ್ರಿಕೋನ ಸಂಬಂಧವಿರುವದು. ಕಾರಣ ಬುಧನ ಅಂತರ್ದಶೆ ಅತ್ಯುತ್ತಮ. ಜಾತರಿಗೆ ಪೂರ್ಣ ವೃಶ್ಚಿಕ ರಾಶಿ ದಶೆಯೂ ಒಳ್ಳೆಯದು ಇರುವದು. ರಾಶ್ಯಧಿಪತಿ ಮಂಗಳನು ತನ್ನ ಮನೆಯಲ್ಲಿರುವನು. ಆ ರಾಶಿಯ ಮೇಲೆ ಗುರು ಶುಕ್ರರ ದೃಷ್ಟಿ ಇರುವದು. ಕಾರಣ ಜೈಮಿನಿ ಮತದಂತೆ ವೃಶ್ಚಿಕ ರಾಶಿದಶೆ ಪೂರ್ಣ ಹಿತಕಾರಿ. ಇದರಂತೆ ಧನು ರಾಶಿ ದಶೆ ಉತ್ತಮ.

ರಾಮಾನುಜಾಚಾರ್ಯರೂ ತಮ್ಮ ಭಾವಾರ್ಥ ರತ್ನಾಕರದಲ್ಲಿ ವೃಷಭ ಲಗ್ನದಲ್ಲಿ ಹುಟ್ಟಿದವರಿಗೆ ಬುಧ–ಚಂದ್ರರ ಯೋಗ ಮಹತ್ವದ್ದೆಂದು ಹೇಳಿರುವರು.

## ಆಧಾರಭೂತ ಪದ್ಯಗಳು

ವೃಷಭೇ ಜಾಯಮಾನಸ್ಯ ಚತುರ್ಥೇ ಯದಿ ಚಂದ್ರಮಾಃ ।
ಗುರುಣಾ ಚ ಬುಧೇನಾಪಿ ವೀಕ್ಷಿತೋ ಯೋಗದಃ ಸ್ಮೃತಃ ॥

ವೃಷಭಲಗ್ನದಲ್ಲಿ ಹುಟ್ಟಿದವರಿಗೆ ಚಂದ್ರನು ಚತುರ್ಥದಲ್ಲಿದ್ದು ಗುರುವಿನಿಂದಾಗಲಿ, ಬುಧನಿಂದಾಗಲಿ ದೃಷ್ಟನಾಗಿದ್ದರೆ ಯೋಗಫಲವು ಸಿಗುವದು.

ಉದಾಹೃತ ಕುಂಡಲಿಯಲ್ಲಿ ಚತುರ್ಥದಲ್ಲಿ ಚಂದ್ರನಿದ್ದು ಸಪ್ತಬಿಂದುಗಳಿಂದ ಕೂಡಿರುವದು. ದಶಮದಲ್ಲಿ ಬುಧನಿರುವನು. ಪರಸ್ಪರ ದೃಷ್ಟಿಯಿರುವದು. ಕಾರಣ ಬುಧನ ಅಂತರ್ದಶೆಯಲ್ಲಿ (೫೨ ರಿಂದ ೫೩½ ವರ್ಷದ ವರೆಗೆ ಇರುವದು.) ಬುಧನೂ ೬ ಬಿಂದುಗಳಿಂದ ಕೂಡಿರುವದರಿಂದ ಯೋಗಫಲವು ಈ ವೇಳೆಯಲ್ಲಿ ಜಾತರಿಗೆ ಸಿಗಬಹುದಾಗಿ ತೋರುವದು. **'ಲಾಭಸ್ಥೌ ಭಾನುಭಾರ್ಗವೌ ದೀರ್ಘಾಯುಃ ಯೋಗವಾನ್ ಸದಾ'** ರವಿ ಶನಿಯೋಗಕ್ಕೆ ಭಾವಾರ್ಥ ರತ್ನಾಕರದ ಆಧಾರವೂ ದೊರಕುವದು.

ಸರ್ವಾಷ್ಟಕ ವರ್ಗದಿಂದ ತಿಳಿದು ಬರುವ ಅಂಶಗಳು :

ಲಗ್ನ, ನವಮ, ದಶಮ, ಏಕಾದಶಗಳಲ್ಲಿ ೩೦ ಕ್ಕಿಂತ ಹೆಚ್ಚು ಬಿಂದುಗಳು ಬಿದ್ದಿದ್ದರೆ ಅವನು ಜನ್ಮವಿರುವ ವರೆಗೆ ರಾಜಯೋಗ ಫಲವನ್ನು ಅನುಭವಿಸುವನು. ಅಧಿಕಾರ, ಮಾನ, ಸುಖಗಳು ರಾಜಸಮಾನವಾಗಿ ದೊರಕುವವು.

ಲಗ್ನ, ನವಮ, ದಶಮ, ಏಕಾದಶಗಳಲ್ಲಿ ೨೫ ಕ್ಕಿಂತ ಕಡಿಮೆ ಬಿಂದುಗಳಿದ್ದರೆ, ದಾರಿದ್ರ್ಯ, ಅಶಕ್ತತೆ ತೋರುವವು. ಕೆಲವುಗಳಲ್ಲಿ ೨೫ ಕ್ಕಿಂತ ಕಡಿಮೆ, ಕೆಲವುಗಳಲ್ಲಿ ೩೦ ಕ್ಕಿಂತ ಹೆಚ್ಚು ಇದ್ದರೆ ಮಿಶ್ರಫಲ.

ಲಗ್ನ ೯–೧೦–೧೧ ರಲ್ಲಿ ೧೯–೨೨ರ ನಡುವೆ ಬಿಂದು ಇರಲು ಕೈಲೋಡ-ವಿಡಿದು ತಿರಿದುಣ್ಣುವರು.

**' ಕರತಲಭಿಕ್ಷಾ ತರುತಲವಾಸಃ ತದಪಿ ನ**
**ಮುಂಚತ್ಯಾಶಾಪಶಃ '**

ಲಗ್ನದಲ್ಲಿ ೩೦ ಕ್ಕಿಂತ ಕಡಿಮೆ ಬಿಂದುಗಳಿದ್ದು ಮೂರನೇ ಭಾವ-ದಲ್ಲಿ ೩೦ ಕಿಂತ ಹೆಚ್ಚು, ಬಿಂದುಗಳಿದ್ದರೆ ಪಾರ್ಲಿಮೆಂಟದಲ್ಲಿ ಆವನಿಗೆ ರಾಜ್ಯಾಧಿಕಾರ ದೊರಕುವದು.

ಲಗ್ನ, ಚಂದ್ರ, ತದ್ದಶನು, ತಮೇಕಾವರಗಳಲ್ಲಿ, ೩೦ ಕ್ಕಿಂತ ಹೆಚ್ಚು ಬಿಂದುಗಳು ಪ್ರತಿಯೊಂದರಲ್ಲಿದ್ದರೆ ಮತ್ತು ಗುರುವಿನ ದೃಷ್ಟಿ ಬಿದ್ದಿದ್ದರೆ ಅವನು ಮಂತ್ರಿಯಾಗುವನು.

ಚತುರ್ಥದಲ್ಲಿ ೩೦ ಬಿಂದುಗಳಿದ್ದು ಆ ಭಾವವು ಶುಭ ಗ್ರಹಯುಕ್ತ ಅಥವಾ ದೃಷ್ಟವಾಗಿದ್ದರೆ ಜಾತನು ಪಲ್ಲಕ್ಕಿಯಲ್ಲಿ ಕೂಡುವನು. ಸ್ವಾಮಿ-ಗಳಂತೆ ಅವನಿಗೆ ಪಾಲಕಾರೋಹಣ ಯೋಗವಿರುವದು.

ಲಗ್ನಾಧಿಪತಿ ಚತುರ್ಥದಲ್ಲಿದ್ದು ೩೦ ಬಿಂದುಗಳಿದ್ದರೆ ಅವನು ಜಮೀ-ನದಾರನಿರುವನು. ಸುಖಿಯಾಗಿ ಅಭ್ಯುದಯವನ್ನು ಹೊಂದುವನು.

ಶನಿಯ ೭|| ಯನ್ನು ನೋಡುವಾಗ ಕೂಡ ಈ ಬಿಂದುಗಳನ್ನು ಗಣನೆಗೆ ತಕ್ಕೊಳ್ಳುವರು. ೩೦ ಕ್ಕಿಂತ ಹೆಚ್ಚು ಬಿಂದುಗಳು ಬಿದ್ದಿರುವ ರಾಶಿಯಲ್ಲಿ ಅವನ ತಾಪತ್ರಯ ಕಡಿಮೆ. ೨೫ ಕ್ಕಿಂತ ಕಡಿಮೆ ಬಿಂದುಗಳಿದ್ದರೆ ತಾಪ-ತ್ರಯ ಹೆಚ್ಚು. ಇದರಿಂದ ೭|| ಯಲ್ಲಿಯ ಏರಿಳಿತಗಳು ತಿಳಿಯುವವು.

ಭಾಗ್ಯೇ ವಾ ತನುಭೇಽಥ ವ್ಯೋಮಕೇಂದ್ರೇ ಲಗ್ನೇತ ನೂನಂ ನಿಧಿಃ ।
ಪಶ್ಚಾತ್ ಲಗ್ನಗತಾಕ್ಷ ಸಂಪ್ರಯಸಃ ಸ್ಯಾತ್ ಜಾತಕೋಽಂ ಶುಭಂ ।
ಲಾಭಾದೂನ ಫಲೇಽವ್ಯಯೇ ಚ ಧನವಾನ್ ಸ್ಯಾತ್ಸ್ಯೋ ಭವೇದನ್ಯಥಾ ।
ಲಾಭಃ ಕರ್ಮಸುಖಾತ್ ಫಲೇಽಧಿಕಫಲೇ ಯತ್ಕೋಽಚಿತೋ ನಾನ್ಯಥಾ ॥

ಲಗ್ನದಲ್ಲಿ ೨೫ ಕ್ಕಿಂತ ಹೆಚ್ಚು ಬಿಂದುಗಳಿದ್ದರೆ ಅಥವಾ ನವಮದಲ್ಲಿ ೨೯ ಕ್ಕಿಂತ ಹೆಚ್ಚು ಬಿಂದುಗಳಿದ್ದರೆ ಪ್ರತಿಯೊಂದಕ್ಕೂ ಪಾಪಗ್ರಹದ ಸಂಬಂಧ ಬರದಿದ್ದರೆ ಅವನಿಗೆ ನಿಧಿ ಸಿಗುವದು. ( ಈಗಿನ ಕಾಲದಲ್ಲಿ ಲಾಟರಿ ಹತ್ತಬಹುದು.) ಲಾಟರಿ ಮೊದಲಾದ ಆನುಮಾನಿಕ ಧನಾಗಮನಕ್ಕೆ ಶಾಸ್ತ್ರಕಾರರು ಮೊದಲು ಪಂಚಮ ಭಾವವನ್ನು ಪರೀಕ್ಷಿಸುವರು. ಅಲ್ಲಿ ಬಲವಾನ್ ಗುರು, ಶುಕ್ರರು ಇರುವದು ಒಳ್ಳೆಯದು. ಅಲ್ಲಿ ೭-೮ ಬಿಂದುಗಳಿಂದ ಅವರು ಕೂಡಿದ್ದರೆ ಅತ್ಯುತ್ತಮ.

೧೧ನೇ ಭಾವಕ್ಕಿಂತ ೧೨ ನೇ ಭಾವದಲ್ಲಿ ಕಡಿಮೆ ಬಿಂದುಗಳಿದ್ದರೆ ಮಾನವನು ಶ್ರೀಮಂತನಾಗುವನು. ( ಉದಾಹೃತ ಕುಂಡಲಿಯಲ್ಲಿ ಸಮಸಂಖ್ಯಾಕ ಬಿಂದುಗಳು ಇರುವವು. ಸ್ಥಿತಿವಂತರಿರುವರು.) ದಶಮಕ್ಕಿಂತ ಏಕಾದಶದಲ್ಲಿ ಹೆಚ್ಚು ಬಿಂದುಗಳಿದ್ದರೆ ಪ್ರಯತ್ನಕ್ಕಿಂತ ಹೆಚ್ಚು ಫಲವಾಗುವದು. ಕಡಿಮೆ ಇದ್ದರೆ ಪ್ರಯತ್ನ ಹೆಚ್ಚು, ಫಲ ಕಡಿಮೆ. ಇಲ್ಲಿ ಕೂಡಿಯೆ ಇರುವವು. ಪ್ರಯತ್ನಮಾನದಿಂದ ಅದರ ಕ್ಕೆ ಫಲವು ಸಿಗುವದು.

ದೇವಾಚಾರ್ಯೇ ವಾಹನಸ್ಥೇ ಸ್ವತುಂಗೇ ।
ಚತ್ವಾರಿಂಶತ್ ಬಿಂದುಸಂಖ್ಯಾ ಸಮೇತೇ ।
ಮೇಷಾಗಾರೇ ಲಗ್ನಗೇ ವಾಸರೇಶೇ ।
ಜಾತೋ ರಾಜಾ ಲಕ್ಷಸಂಖ್ಯಾಶ್ವನಾಥಃ ॥

ಉಚ್ಚ ಗುರು ಚತುರ್ಥದಲ್ಲಿ ೪೦ ಬಿಂದುಗಳಿಂದ ಕೂಡಿರಬೇಕು. ಮೇಷ ಲಗ್ನವಿದ್ದು ಅಲ್ಲಿ ರವಿ ಇರಬೇಕು. ಜಾತನು ರಾಜನಾಗುವನು. ಲಕ್ಷ ಕುದುರೆಗಳ ಒಡೆಯನಾಗುವನು.

ಚತ್ವಾರಿಂಶತ್ ಬಿಂದುಯುಕ್ತೇ ವಿಲಗ್ನೇ ।
ಚಾಪೇ ಜೀವೇ ಭಾರ್ಗವೇ ಮೀನರಾಶೌ ।
ಸ್ವೋಚ್ಚೇ ಭೌಮೇ ಕುಂಭಗೇ ಭಾನುಪುತ್ರೇ ।
ಜಾತಃ ಸರ್ವ[illegible]ಧಿಪಃ ಸಾರ್ವಭೌಮಃ ॥

ಲಗ್ನದಲ್ಲಿ ೪೦ ಬಿಂದುಗಳು ಇರಬೇಕು. ಧನುವಿನಲ್ಲಿ ಗುರು, ಮೀನ ದಲ್ಲಿ ಶುಕ್ರ, ಮಕರದಲ್ಲಿ ಮಂಗಳನಿದ್ದರೆ, ಸಕಲ ಸಂಪತ್ತುಳ್ಳ ಸಾರ್ವಭೌಮ ನಾಗುವನು. ಇಂತಹ ಕುಂಡಲಿಗಳು ದುರ್ಲಭ.

ದಶಮ ಭವನರೇಖಾಭ್ಯೋಽಧಿಕಂ ಲಾಭಮಾನಂ ।
ಭವತಿ ಯದಿ ನಿಹೀನಂ ಸ್ಯಾದ್ವ್ಯಯಾಚ್ಚಂ ತತೋಽಪಿ ।
ಅಧಿಕತರ ವಿಲಗ್ನಂ ಭೋಗಸಂಪತ್ತಿ ಭೋಕ್ತಾ ।
ವಿಸಿಮುಯುವಳತದ್ವ್ಯಸ್ತೀತ್ವಂ ಜನಸ್ಯ ॥

ಲಾಭದಲ್ಲಿ ದಶಮಕ್ಕಿಂತ ಹೆಚ್ಚು ಬಿಂದುಗಳಿರಬೇಕು. (ಕೆಲವು ಗ್ರಂಥಗಳಲ್ಲಿ ಬಿಂದು ಶಬ್ದದ ಬದಲಾಗಿ ರೇಖೆಗಳನ್ನು ತಕ್ಕೊಂಡಿರುವರು.) ೧೨ ರಲ್ಲಿ ದಶಮಕ್ಕಿಂತ ಕಡಿಮೆ ಬಿಂದುಗಳಿರಬೇಕು. ಲಗ್ನದಲ್ಲಿ ೧೨ರಲ್ಲಿ ಗಿಂತ ಹೆಚ್ಚು ಬಿಂದುಗಳಿರಬೇಕು. ಅವನು ಭೋಗ-ಸಂಪತ್ತಿ ಭೋಕ್ತಾರ ನಾಗುವನು. ಇಲ್ಲಿ ಹತ್ತನೇ ಭಾವಕ್ಕಿಂತ ಕಡಿಮೆ ಬಿಂದುಗಳು ೧೨ರಲ್ಲಿರು ವವು. ಲಗ್ನದಲ್ಲಿಯೂ ೧೨ ನೇ ಮನೆಗಿಂತ ಹೆಚ್ಚು ಬಿಂದುಗಳಿರುವವು— ಶ್ಲೋಕದಲ್ಲಿ ಹೇಳಿದಂತೆ. ಆದರೆ ೧೧ ರಲ್ಲಿ ೧೦ ಕ್ಕಿಂತ ಕಡಿಮೆ ಬಿಂದು ಗಳಿರುವವು. ಕೊಂಚ ನ್ಯೂನತೆ.

ರಾಹು: ೨-೮-೧೨ರಲ್ಲಿದ್ದು ಅಲ್ಲಿ ಬಿದ್ದ ಬಿಂದುಗಳ ಸಂಖ್ಯಾಕವರ್ಷ ದಲ್ಲಿ ಗೋಚರೀ ರಾಹು ಅಲ್ಲಿ ಸಂಚರಿಸುವಾಗ ಸರ್ಪಭಯ, ವಿಷಭಯ. (ಉದಾಹೃತ ಕುಂಡಲಿಯಲ್ಲಿ ಈ ಯೋಗವಿಲ್ಲ.)

ಇದರಂತೆ ಮಂಗಳನಿರುವ ರಾಶಿಗತ ಬಿಂದು ಸಂಖ್ಯಾಕ ವರ್ಷದಲ್ಲಿ ಜ್ವರಭಯ, ಶಸ್ತ್ರಭಯ. ಶನಿ ಇದ್ದ ರಾಶಿಗತ ಬಿಂದು ಸಂಖ್ಯಾಕ ವರ್ಷ ದಲ್ಲಿ ರೋಗ-ಶೋಕಭಯವಿರುವದು. ಗ್ರಹಗಳು ದುರ್ಬಲವಿದ್ದರೆ, ತತ್ಕಾಲ ದಲ್ಲಿ ಗೋಚರೀ ಮಂಗಳ ಶನಿಗಳು ಅಲ್ಲಿ ಸಂಚರಿಸುತ್ತಿದ್ದರೆ ಮಾತ್ರ

ಸಾಂಖ್ಯ ಶಾಸ್ತ್ರಜ್ಞರು ಹೇಳುವಂತೆ ೨೪ ತತ್ವಗಳು; ಪೃಥ್ವಿ ಅಪ್‌ತೇಜೋ ವಾಯು ಆಕಾಶ. ೫ ತನ್ಮಾತ್ರಗಳು–ರೂಪ, ರಸ, ಗಂಧ,

ಸ್ಪರ್ಶ, ಧ್ವನಿ ಪಂಚಜ್ಞಾನೇಂದ್ರಿಯಗಳು, ಚಕ್ಷುಃ ಕರ್ಣ ನಾಸಿಕ ರಸನೆ-ತ್ವಚೆ ೫ ಕರ್ಮೇಂದ್ರಿಯಗಳು; ಕಾಲು, ಕೈ, ಗುದ, ಉಪಸ್ಥಾ ಧ್ವನಿ, ಮನಸ್ಸು, ಬುದ್ಧಿ, ಅಹಂಕಾರ, ಪ್ರಕೃತಿ ಇವು ೨೪ ತತ್ವಗಳು. ಪುರುಷ ೨೫ ನೆಯ ತತ್ವವು; ಪುರುಷನಿಂದ ಈ ತತ್ವಗಳು ಪೃಷ್ಟವಾಗಿ ಉತ್ಕ್ರಾಂತಿ ಆರಂಭವಾಗುವದು.

ಜನ್ಮವು ಉತ್ಕ್ರಾಂತಿ ತತ್ವದಂತೆ ಮೋಕ್ಷರಾಗುವವರೆಗೆ ಸಾಗುವದು. ಲಗ್ನವು ಜನ್ಮವನ್ನು ಸೂಚಿಸುವದು. ಅಲ್ಲಿ ೨೫ ಬಿಂದುಗಳಿದ್ದರೆ, ೨೫ ತತ್ವಗಳಿಗೆ ಸಮವಾಗಿರುವದು. ಪಂಚಮಭಾವವು ೨೫ ಬಿಂದುಗಳಿಂದ ಕೂಡಿದ್ದರೆ ಇದು ಪೂರ್ವಪುಣ್ಯವನ್ನು ಸೂಚಿಸುವ ಭಾವ; ಅದು ಸಮ-ವಾಗಿರುವದೆಂದು ತಿಳಿಯಬೇಕು. ಮುಂದಿನ ಪ್ರಗತಿಗೆ ಕರ್ಮಭಾವ ಅವಶ್ಯ. ಅಲ್ಲಿ ೨೫ ಕ್ಕಿಂತ ಹೆಚ್ಚು ಬಿಂದುಗಳಿದ್ದರೆ ಮುಂದಿನ ಪ್ರಗತಿಸೂಚಕ; ಪ್ರಗತಿ ಪೂರ್ಣವಾಗಲಿಕ್ಕೆ ಈ ಜನ್ಮದ ಪುಣ್ಯ-ಕರ್ಮ ( ದಾನ-ಧರ್ಮಾದಿಗಳು ) ಸಾಧಕ. ಅದನ್ನು ನವಮ ಭಾವವು ಸೂಚಿಸುವದು. ಇದು ತಪಸ್ಥಾನವು. ಇಲ್ಲಿ ಹೆಚ್ಚು ಬಿಂದುಗಳಿದ್ದರೆ ದೈವೀ ಅನುಗ್ರಹ ಸೂಚಕ. ಇದಕ್ಕೆ ಸಾಕಷ್ಟು ಧೈರ್ಯ ಬೇಕು. ಅದನ್ನು ೩ ನೇ ಭಾವ ಸೂಚಿಸುವದು.

೩ ನೇ ಭಾವದಲ್ಲಿ ೨೮ ಬಿಂದುಗಳಿರುವವು. ಈ ಜನ್ಮದಲ್ಲಿ ಪ್ರಗತಿ-ಯನ್ನು ಸಾಧಿಸಿಕೊಳ್ಳಲಿಕ್ಕೆ ಜಾತರಲ್ಲಿ ಸಾಕಷ್ಟು ಧೈರ್ಯವಿರುವದು. ನವಮ, ದಶಮಭಾವಗಳು ೩೪-೩೧ ಬಿಂದುಗಳಿಂದ ಬಲಶಾಲಿಯಾಗಿರು-ವವು. ಲಗ್ನ, ಧನ, ಭಾವಗಳಲ್ಲಿ ೩೨ ಬಿಂದುಗಳಿಂದ ದೇಹಬಲ, ಆರ್ಥಿಕ ಬಲವೂ ಸಾಕಷ್ಟು ಬಲಿಷ್ಠನಿರುವವು. ಚತುರ್ಥ ಪಂಚಮಭಾವ-ಗಳು ಮಾತ್ರ ಆಧ್ಯಾತ್ಮಿಕ ಪ್ರಗತಿಗೆ ಕೆಲಮಟ್ಟಿಗೆ ಅಡ್ಡಿಯನ್ನುಂಟು ಮಾಡುವವು. ಸಪ್ತಮಭಾವವು ಸಮವಾಗಿರುವದು.

ಚತುರ್ಥ-ಪಂಚಮಭಾವಗಳು ಭೌತಿಕ ಜಗತ್ತಿನ ಕಡೆಗೆ ಜಗ್ಗುವವು. ನವಮ ಕರ್ಮಭಾವಗಳು ಲಗ್ನ ತೃತೀಯಾದಿ ಭಾವಗಳು ಹೆಚ್ಚು ಬಲಿಷ್ಠ ಇರುವದರಿಂದ ಆಧ್ಯಾತ್ಮಿಕ ಪ್ರವೃತ್ತಿಯನ್ನು ಹೆಚ್ಚಿಸಿ ಈ ಜನ್ಮದಲ್ಲಿ ಸಾಕಷ್ಟು

ಆತ್ಮಿಕವಿಕಾಸವನ್ನುಂಟುಮಾಡುವವು. ೬ ನೇ ಭಾವವು ದಶಮದಿಂದ ಭಾಗ್ಯಸ್ಥಾನ, ನವಮದಿಂದ ಕರ್ಮಸ್ಥಾನ. ಅಲ್ಲಿ ೩೩ ಬಿಂದುಗಳಿರುವದರಿಂದ ಇದು ಈ ದೃಷ್ಟಿಯುಳ್ಳ ಪ್ರಯತ್ನದಲ್ಲಿ ಯಶಸ್ಸನ್ನು ಕೊಡುವದು. ೨೫ ಕ್ಕಿಂತ ಕಡಿಮೆ ಬಿಂದುಗಳು ೧೧-೧೨ ಭಾವದಲ್ಲಿ ಇರುವದರಿಂದ ಖರ್ಚು ಹೆಚ್ಚು, ಮಿತ್ರರ ಸಹಕಾರ ಕಡಿಮೆ.

ಆಧಾರ ಪದ್ಯ

ತತ್ತ್ವಮಾಕೃತಿ ರಕಾಂಕ್ಷ್ವ ಛಂದಸ್ತತ್ತ್ವಂ ಚತುಸ್ತ್ರಯಃ ।
ಏಕೋನವಿಂಶತ್ ಛಂದಾಸಿ ನವಾಕ್ಷೀ ಷಟ್‌ತ್ರಯಸ್ತಥಾ ।
ವೇದೇಷವೋ ನೃಪಾರ್ಕೈಭ್ಯೋ ಯೇಽಲ್ಪಾಧಿಕ ಫಲಾ
ನೃಣಾಂ ।
ಭಾವಾ ಲಗ್ನಾದಯಸ್ತೇಷಾಂ ಹಾನಿಂ ವಾ ಪುಷ್ಟಿ-
ಮಾದಿಶೇತ್ ॥

# ಸಮುದಾಯಾಷ್ಟಕವರ್ಗದಲ್ಲಿ ಬಿದ್ದ ಬಿಂದುಗಳು

ಸರ್ವಾಷ್ಟಕವರ್ಗದಲ್ಲಿ ಬಿದ್ದ ಬಿಂದು ಸಂಖ್ಯೆಗೆ ೧೨ ರಿಂದ ಭಾಗಿಸಬೇಕು. ಉಳಿದ ಬಿಂದುಗಳನ್ನು ಆಯಾ ಭಾವದಲ್ಲಿ ಬರೆಯಬೇಕು.

ಮಂಡಲದ ಶೋಧನದ ನಂತರ ೧೨ ಭಾವದಲ್ಲಿ ಉಳಿಯುವ ಬಿಂದುಗಳು.

ಇದು ಮಂಡಲ ಶೋಧನ



ಅಷ್ಟವರ್ಗಂ ಸಮುದ್ಧೃತ್ಯ ಗ್ರಹಾಣಾಂ ರಾಶಿ-
ಮಂಡಲೇ ।
ಏಕಸ್ಮಿನ್ ಮಂಡಲಾಧಿಕ್ಯೇ ಶೋಧಯೇಚ್ಚ
ಕ್ರಮಂಡಲಂ ।
ದ್ವಾದಶಾದೌತು ಗೃಹ್ಣೀಯಾದೇನಂ ಸರ್ವೇಷು
ರಾಶಿಷು ।
ಪ್ರಾಗ್ವತ್-ತ್ರಿಕೋಣಂ ಸಂಶೋಧ್ಯ ಪಶ್ಚಾ-
ದೇಕಾಧಿಪತ್ಯಕಾ ।
ಪೂರ್ವೋಕ್ತಗುಣಕಾರೈಶ್ಚ ವರ್ಧಯೇಚ್ಚ ಪೃಥಕ್
ಪೃಥಕ್

## ತ್ರಿಕೋಣ ಶೋಧನ



ಏಕೀಕೃತ್ಯ ತು ತತ್ಸರ್ವಂ ಸಪ್ತಭಿಃ ಗುಣಯೇತ್ ಪುನಃ ।
ಸಪ್ತವಿಂಶತಿಭಿರ್ಲಬ್ಧಂ ಫಲಂ ಭೂಯಾತ್ ॥

### ಗ್ರಹ ಗುಣಾಕಾರ

| | |
|---|---|
| ರವಿ | ೧೦ × ೫ = ೫೦ |
| ಶನಿ | ೧೦ × ೫ = ೫೦ |
| ಮಂಗಳ | ೩ × ೮ = ೨೪ |
| ಶುಕ್ರ | ೩ × ೭ = ೨೧ |
| ಚಂದ್ರ | ೨ × ೫ = ೧೦ |
| ಗುರು | ೩ × ೧೦ = ೩೦ |
| | ೧೮೫ ಗ್ರಹಪಿಂಡ. |

### ಏಕಾಧಿಪತ್ಯ ಶೋಧನ



**ರಾಶಿ ಗುಣಾಕಾರ :**

ಮಿಥುನ ೩ × ೮ = ೨೪
ಕರ್ಕ ೨ × ೪ = ೮
ಕನ್ಯಾ ೧ × ೫ = ೫
ತುಲಾ ೨ × ೭ = ೧೪
ಮಕರ ೨ × ೫ = ೧೦
ಮೀನ ೧೦ ೧೨=೧೨೦
ಮೇಷ ೩ × ೭ = ೨೧

——
೨೦೨

ರಾಶಿಪಿಂಡ ೨೦೨
ಗ್ರಹಪಿಂಡ ೧೮೫

———
೩೮೭ ಶೋಧ್ಯಪಿಂಡ

ಸಮುದಾಯಾಷ್ಟಕವರ್ಗದ ಶೋಧ್ಯಪಿಂಡ ( ೩೮೭ ) ವನ್ನು ಆಯಾ ಭಾವದಲ್ಲಿ ಬಿದ್ದ ಬಿಂದುಗಳಿಂದ ಗುಣಿಸಿ ೨೭ ರಿಂದ ಭಾಗಿಸಿ ಉಳಿದ ನಕ್ಷತ್ರದಲ್ಲಿ ಶನಿಯು ಸಂಚಾರ ಭಾವಫಲಕ್ಕೆ ಹಾನಿಯನ್ನುಂಟುಮಾಡುವದು.

೩೮೭ × ೩೨

೩೮೭
ಲಗ್ನದಲ್ಲಿ ೩೨
———
೭೭೪
೧೧೬೧
———
೧೨೩೮೪

೨೭ ) ೧೨೩೮೪ ( ೪೫೮
೧೦೮
———
೧೫೮
೧೩೫
———
೨೩೪
೨೧೬
———
೧೮

೧೮ನೆಯ ನಕ್ಷತ್ರ ಜ್ಯೇಷ್ಠಾ.

ಜ್ಯೇಷ್ಠಾ ನಕ್ಷತ್ರದಲ್ಲಿ ಶನಿಯು ಸಂಚಾರ ಮಾಡುವಾಗ ಶಾರೀರಿಕ ಜಾಡ್ಯ, ನಿರುತ್ಸಾಹವನ್ನು ಹುಟ್ಟಿಸುವನು. ರೇವತಿಯಲ್ಲಿ ಕೂಡ ಹೀಗೇ ಶನಿಯ ಸಂಚಾರ ೧೯೬೮ನೆಯ ಇಸವಿಯ ಆರಂಭದಲ್ಲಿ ರೇವತಿಯಲ್ಲಿ ಆಗಿತ್ತು.

ದ್ವಿತೀಯ ಭಾವದಲ್ಲಿ ಇಷ್ಟೇ ಬಿಂಮಗಳು ಬಿದ್ದಿರುವದರಿಂದ ಧನ-ಹಾನಿ, ಕೌಟುಂಬಿಕ ತೊಂದರೆಗಳು; ೧೯೬೮ ನೆಯ ಇಸವಿಯ ಪೂರ್ವಾರ್ಧದಲ್ಲಿ.

೩೮೭
ಕರ್ಮಭಾವದಲ್ಲಿ ೩೧
——
೩೮೭
೧೧೬೧
——————
೨೭ ) ೧೧೯೯೭ ( ೪೪೪
೧೦೮
——
೧೧೯
೧೦೮
——
೧೧೭
೧೦೮
——
೦೯

೯ ನೆಯ ನಕ್ಷತ್ರ ಆಶ್ಲೇಷಾ.

ಜ್ಯೇಷ್ಠಾ, ರೇವತಿ ಇವು ತ್ರಿಕೋಣ, ನಕ್ಷತ್ರಗಳು. ಈಗ ಸದ್ಯದಲ್ಲಿ ಜ್ಯೇಷ್ಠಾ ನಕ್ಷತ್ರದಲ್ಲಿ ಶನಿಯು ಸಂಚಾರವದೆ. ೧೯೫೮ ಅಕ್ಟೋಬರ ಕೊನೆಯ ವಾರದಲ್ಲಿ ಜ್ಯೇಷ್ಠಾ ಬಿಡುವನು. ತದನಂತರ ಕಾರ್ಯಗಳಿಗೆ ಪ್ರೋತ್ಸಾಹ ಬರುವದು. ೧೯೬೮ ನೆಯ ಇಸವಿಯಲ್ಲಿ, ಪೂರ್ವಾರ್ಧದಲ್ಲಿ ರೇವತಿ—ಶನಿಯ ಸಂಚಾರ ಕಾರ್ಯ-ಗಳಿಗೆ ಎಡರುಗಳು ಬರುವವು. ಸಾವ-ಧಾನವಾಗಿರಬೇಕು.

ಶೋಧ್ಯಪಿಂಡ ೩೮೭ ೨೨ ಬಿಂದುಗಗಳು.

× ೨೨ ಚತುರ್ಥ ಪಂಚಮ ಭಾವದಲ್ಲವೆ.

———

೭೭೪

೭೭೪

———————

೨೭) ೮೫೧೪ (೩೧೫

೮೧

——

೪೧

೨೭

———

೧೪೪

೧೩೫

——

೦೯ ೯ ನೆಯ ನಕ್ಷತ್ರ ಆಶ್ಲೇಷಾ.

ಆಶ್ಲೇಷಾ ತ್ರಿಕೋನ ನಕ್ಷತ್ರ ಜ್ಯೇಷ್ಠಾ ರೇವತೀ. ಈ ನಕ್ಷತ್ರಗಳಲ್ಲಿ ಶನಿಯ ಸಂಚಾರ ಮನೆತನದಲ್ಲಿ ತೊಂದರೆಗಳನ್ನು ಹುಟ್ಟಿಸುವದು. ೧೯೬೮ ಪೂರ್ವಾರ್ಧ ಮಕ್ಕಳಿಗೆ ತೊಂದರೆಗಳು.

೩೮೭

× ೨೫ ಕಲತ್ರ ಭಾವದಲ್ಲಿ.

———

೧೯೩೫

೭೭೪

———

೯೬೭೫

೨೭) ೯೬೭೫ (೩೫೮
೮೧
——
೧೫೭
೧೩೫
——
೨೨೫
೨೧೬
——
೦೯

ಇದು ೯ ನೆಯ ನಕ್ಷತ್ರ, ಆಶ್ಲೇಷಾ ಬರುವದು. ೧೯೬೮ ನೆಯ ಇಸವಿ ಪೂರ್ವಾರ್ಧದಲ್ಲಿ ಕಲತ್ರಭಾವಕ್ಕೆ ತೊಂದರೆಗಳು.

## ಆಧಾರಭೂತ ಪದ್ಯಗಳು

ಭಾವಂ ವಿಲೋಕ್ಯ ಸದಸತ್ ಫಲದಾಂಸಕಂ ತು ।
ತದ್ರಾಶಿ ಸಂಭವಫಲೈಕ್ಯ ತದುಕ್ತಪಿಂಡಮ್ ।
ನಿಘ್ನಂ ಭಭಕ್ತ ಪರಿಶೇಷಕಮೇ ಪ್ರಯಾತಿ ।
ಸೌರಿಸ್ತದಾ ಭಾವಫಲಸ್ಯ ಹಾನಿಃ ।
ಪೂರ್ವೈರುಕ್ತಂ ಸೌರಿನಕ್ಷತ್ರಕಾಲೇ ರಿಷ್ಟಂ ರಾಶೌ
ವಿಶ್ವನಾಥಸ್ತಮಾಹ ।
ಪಿಂಡೇ ರೇಖಾ ತಾಡಿತೇ ಭಾವಶೇಷೇ ರಾಶೌ ತಸ್ಮಿನ್ ಯಾತಿ
ಸೌರಿಃ ಸಮಾಯಾಂ ।
ಯಸ್ಯಾಂ ತಸ್ಮಿನ್ ಭಾವಹಾನಿಂ ಚ ವಿಂದ್ಯಾತ್ ।
ರಾಹುರ್ವರ್ಷೇ ವಾಥವಾ ತತ್ ತ್ರಿಕೋಣೇ ।
ಕೃತ್ವಾ ಬಿಂದುಭ್ಯಸ್ತು ಕಾಲಂ ಸುಧೀಮಾನ್ ।
ತಸ್ಮಾದ್ವಾಚ್ಯಃ ಪ್ರಾಪ್ತಿಕಾಲಃ ಶುಭಸ್ತ್ವೇ ।

ಶೋಧ್ಯಪಿಂಡಕ್ಕೆ ಭಾವಗತ ಬಿಂದು ಸಂಖ್ಯೆಯಿಂದ ಗುಣಿಸಿ, ೧೨ ರಿಂದ ಭಾಗಿಸಿ ಉಳಿವ ಶೇಷ ರಾಶಿಯಲ್ಲಿ ಶನಿಯು ಸಂಚಾರ ಭಾವಕ್ಕೆ ಪೀಡಾಕರ.

ರೇಖೆಗಳ ಶೋಧ್ಯಪಿಂಡಕ್ಕೆ ಭಾವಗತ ಬಿಂದು ಸಂಖ್ಯೆಯಿಂದ ಗುಣಿಸಿ ೨೭ ರಿಂದ ಭಾಗಿಸಲು, ಉಳಿದ ನಕ್ಷತ್ರ ಸಂಖ್ಯೆಯಲ್ಲಿ ಶನಿಯ ಸಂಚಾರವು ಭಾವಫಲಕ್ಕೆ ಪುಷ್ಟಿಕರ. ೧೨ ರಿಂದ ಭಾಗಿಸಿ ಉಳಿದ ರಾಶಿಯಲ್ಲಿ ಶನಿಯ ಸಂಚಾರ

ಮುಂದೆ ರೇಖಾ—ಗಣನೆಯಲ್ಲಿ ಉದಾಹರಣೆಗಳಿರುವವು.



# ರೇಖಾ ಗಣನೆ

## ಸರ್ವಾಷ್ಟಕವರ್ಗದಲ್ಲಿ

ಒಂದು ಗ್ರಹಕ್ಕೆ ೮ ಬಿಂದುಗಳು, ೭ ಗ್ರಹಕ್ಕೆ ೫೬ ಬಿಂದುಗಳು. ಪ್ರತಿಯೊಂದು ಭಾವದಲ್ಲಿ ಬಿದ್ದ ಬಿಂದುಗಳನ್ನು ೫೬ ರಲ್ಲಿ ಕಳೆಯಲಾಗಿ ಉಳಿಯುವ ಸಂಖ್ಯೆ ರೇಖಾಗಣನೆ– ೧೨ ಭಾವದಲ್ಲಿ ಬಿದ್ದ ರೇಖೆಗಳು.




ಮೇಲಿನ ಅಂಕಿಗಳಿಗೆ ೧೨ (ಮಂಡಲ) ರಿಂದ ಭಾಗಿಸಲಾಗಿ ಶೇಷಾಂಕಗಳು ಆಯಾ ರಾಶಿಗಳಲ್ಲಿ.

## ಮಂಡಲ ಶೋಧನ

| ಲಗ್ನ ಮೇಷ ೧ | ವೃಷಭ ೨ | ಮಿಥುನ ೩ | ಕರ್ಕ ೪ | ಸಿಂಹ ೫ | ಕನ್ಯಾ ೬ | ತುಲಾ ೭ | ವೃಶ್ಚಿಕ ೮ | ಧನು ೯ | ಮಕರ ೧೦ | ಕುಂಭ ೧೧ | ಮೀನ ೧೨ |
|---|---|---|---|---|---|---|---|---|---|---|---|
| ೨೪ | ೨೪ | ೨೮ | ೩೪ | ೩೪ | ೨೩ | ೩೧ | ೨೪ | ೨೨ | ೨೫ | ೩೩ | ೩೩ |
| ೦ | ೦ | ೪ | ೧೦ | ೧೦ | ೧೧ | ೭ | ೦ | ೧೨ | ೧ | ೯ | ೯ |

## ತ್ರಿಕೋಣ ಶೋಧನ



## ಏಕಾಧಿಪತ್ಯ ಶೋಧನ




ಶೋಧ್ಯಾವಶಿಷ್ಟ ೫೫

### ರಾಶಿ ಗುಣಾಕಾರ

| | | | | | |
|---|---|---|---|---|---|
| ಸಿಂಹ | ೧೦ | × ೧೦ | = | ೧೦೦ | |
| ಕನ್ಯಾ | ೧೦ | × ೫ | = | ೫೦ | |
| ಮಕರ | ೯ | × ೫ | = | ೪೫ | |
| ಕುಂಭ | ೧ | × ೧೧ | = | ೧೧ | |
| ಮೀನ | ೫ | × ೧೨ | = | ೬೦ | |
| ಮೇಷ | ೯ | × ೭ | = | ೬೩ | |
| | | | | ೩೨೯ | ರಾಶಿಪಿಂಡ |
| | | | | ೨೪೦ | ಗ್ರಹಪಿಂಡ |
| | | | | ೫೬೯ | ಶೋಧ್ಯಪಿಂಡ |

## ಗ್ರಹ ಗುಣಾಕಾರ

| | |
|---|---|
| ಶುಕ್ರ | ೯ × ೭ = ೬೩ |
| ಮಂಗಳ | ೯ × ೮ = ೭೨ |
| ಬುಧ | ೧ × ೫ = ೫ |
| ಚಂದ್ರ | ೧೦ × ೫ = ೫೦ |
| ರವಿ | ೫ × ೫ = ೨೫ |
| ಶನಿ | ೫ × ೫ = ೨೫ |
| | ೨೪೦ ಗ್ರಹಪಿಂಡ |

ಶೋಧ್ಯಪಿಂಡ

```
೫೬೯                ೨೭ ) ೫೬೯ ( ೨೧
× ೧                     ೫೪
————                    ——
೫೬೯                      ೨೯
                         ೨೭
                         ——
                          ೨
```

ರೇಖಾ ಶೋಧ್ಯಪಿಂಡ ೫೬೯. ಈ ಶೋಧ್ಯಪಿಂಡಕ್ಕೆ ಆ ಭಾವದಲ್ಲಿ ಬಿದ್ದ ರೇಖೆಗಳಿಂದ ಗುಣಿಸಿ ೨೭ ರಿಂದ ಭಾಗಿಸಲಾಗಿ ಶೇಷ ನಕ್ಷತ್ರದಲ್ಲಿ ಶನಿಯ ಸಂಚಾರ ಭಾವಫಲಕ್ಕೆ ಪ್ರಪ್ತಿಯನ್ನು ಕೊಡುವದು.

ಉದಾ :— ದಶಮ ಭಾವದಲ್ಲಿ ೨೫ ರೇಖೆಗಳಿರುವವು.

```
  ೫೬೯
× ೨೫
——————
೧೪೨೨೫
```

೨೭ ) ೧೪೨೨೫ ( ೫೨೬
೧೩೫
———
೭೨
೫೪
———
೧೮೫
೧೬೨
———
೨೩

೨೩ ನೆಯ ನಕ್ಷತ್ರ ಧನಿಷ್ಠಾ.
ಧನಿಷ್ಠಾದಲ್ಲಿ ಶನಿಯ ಸಂಚಾರವು ೧೯೬೩ ರಲ್ಲಿ ಆಗಿತ್ತು. ದಶಮ ಭಾವಕ್ಕೆ ಪುಷ್ಟಿ. ಯೋಗಕಾರನಿರುವದರಿಂದ ಮಾನ, ಗೌರವ, ಅಧಿಕಾರಗಳನ್ನು ಕೊಡುವನು.

೫೬೯
× ೨೨ ನವಮ ಭಾವದಲ್ಲಿ
———
೧೧೩೮
೧೧೩೮
———
೧೨೫೧೮

೨೭) ೧೨೫೧೮ (೪೬೩
೧೦೮
———
೧೭೧
೧೬೨
———
೦೦೯೮
೮೧
———
೧೭

೧೭ ನೆಯ ನಕ್ಷತ್ರ ಅನುರಾಧಾ. ಆ ನಕ್ಷತ್ರದಲ್ಲಿ ಶನಿಯ ಸಂಚಾರ ಭಾಗ್ಯ, ಭಾವಕ್ಕೆ ಪುಷ್ಟಿ ಕೊಟ್ಟಿರುವದು. ೧೯೫೬–೫೭ ನೆಯ ಇಸವಿಯಲ್ಲಿ ರಾಜ ಸಭೆಗೆ ಪುನಃ ಸದಸ್ಯರಾದರು. ಇದರಂತೆ ೧೯೬೯ ನೆಯ ಇಸವಿಯಲ್ಲಿ ಉತ್ತರಾಭಾದ್ರಪದದ ಶನಿ ಭಾಗ್ಯಭಾವಕ್ಕೆ ಪುಷ್ಟಿ, ಧಾರ್ಮಿಕ ಭಾವನೆಯಿಂದ ಜರುಗುವ ಕಾರ್ಯಗಳಿಂದ ಯಶಸ್ಸು.

೫೬೯
×೩೪ ಚತುರ್ಥ ಭಾವದಲ್ಲಿ
———

೨೨೭೬
೧೭೦೭
———

೨೭ ) ೧೯೩೪೬ ( ೭೧೬
೧೮೯
——
೦೦೪೪
೨೭
——
೧೭೬
೧೬೨
——
೧೪

೧೪ ನೆಯ ನಕ್ಷತ್ರ- ಚಿತ್ರಾ.
ಚಿತ್ರಾ-ಧನಿಷ್ಠಾ ಮೃಗಶಿರಾಗಳಲ್ಲಿ, ಧನಿಷ್ಠಾ-ದಲ್ಲಿ ಶನಿಯ ಸಂಚಾರ. ೧೯೬೩ನೆಯ ಇಸವಿಯಲ್ಲಿ ಸೌಖ್ಯವನ್ನುಂಟು ಮಾಡಿತು ಪಂಚಮ ಭಾವದಲ್ಲಿ ಇಷ್ಟೇ ರೇಖೆಗಳಿರುವವು. ಮಕ್ಕಳ ಉತ್ಕರ್ಷ ೧೯೬೩ನೆಯ ಇಸವಿಯಲ್ಲಿ.

೧೨ ) ೧೪೨೨೫ ( ೧೧೮೫
೧೨
——
೨೨
೧೨
——
೧೦೨
೯೬
——
೬೫
೬೦
——
೫

ದಶಮ ಭಾವದಲ್ಲಿ ಬಿದ್ದ ರೇಖೆಗಳಿಂದ ಗುಣಿಸಿ ೧೨ ರಿಂದ ಭಾಗಿಸಲು ಶೇಷ ರಾಶಿಯಲ್ಲಿ ಗುರು ಬರಲು ಮಾನ-ಗೌರವ. ೫ ನೆಯ ರಾಶಿ **ಸಿಂಹ** ರಾಶಿ. ಇದರ ತ್ರಿಕೋನ (ಧನು) ರಾಶಿಗಳ ಶನಿ ಹಿತ-ಕರ್ತನು. ಗುರುವೂ ಹಿತಕಾರಿ. ೧೯೬೦ ನೆಯ ಇಸವಿಯಲ್ಲಿ ಧನುವಿನಲ್ಲಿ ಗುರು ಸಂಚರಿಸಿದನು.

೧೯೫೯ ನೆಯ ಇಸವಿಯಲ್ಲಿ ಶನಿ ಧನುದಲ್ಲಿ ಸಂಚರಿಸಿದನು.

ಇದರಂತೆ ಪ್ರತಿಯೊಂದು ಭಾವಫಲಗಳ ಶುಭಾಶುಭತ್ವವನ್ನು ಊಹಿಸಬಹುದು.

# ಅಷ್ಟಕವರ್ಗದಿಂದ ಆಯುರ್ದಾಯ ವಿಚಾರ

ಆಂಧ್ರ ಪ್ರಾಂತದ ಪ್ರಸಿದ್ಧ ಜ್ಯೋತಿರ್ವಿದರಾದ ತೆಕ್ಕಾಲಿ ರಾಮಮೂರ್ತಿಯವರು ಗ್ರಹಗಳ ಶೋಧ್ಯಪಿಂಡದಿಂದ ಆಯುಷ್ಯ ಗಣನೆಯನ್ನು ಮಾಡಿರುವರು.

### ಅಳತೆಯ ಪ್ರಮಾಣ ಕೋಷ್ಟಕ

| ಅಂಕೆಗಳು | ಏಕ್ಕಂ<br>ವ. ತಿಂ. ದಿ. ಗಳಿಗೆ | ದಹಂ<br>ವ. ತಿಂ. ದಿ. ಗಳಿಗೆ | ಶತಂ<br>ವ. ತಿಂ. ದಿ. ಗಳಿಗೆ |
|---|---|---|---|
| ೧ | ೦—೩—೩-೨೦ | ೨—೭—೩-೨೦ | ೨೫-೧೧-೩-೨೦ |
| ೨ | ೦—೬—೬-೪೦ | ೫—೨—೬-೪೦ | ೨೪-೧೦-೬-೪೦ |
| ೩ | ೦—೯-೧೦—೦ | ೭—೦-೧೦—೦ | ೨೩-೯-೧೦—೦ |
| ೪ | ೧—೦-೧೩-೨೦ | ೧೦-೪-೧೩-೨೦ | ೨೨-೮-೧೩ ೨೦ |
| ೫ | ೧—೩-೧೬-೪೦ | ೧೨-೧೧-೧೬-೪೦ | ೨೧-೭-೧೬-೪೦ |
| ೬ | ೧—೬-೨೦—೦ | ೧೫—೬-೨೦—೦ | ೨೦-೬-೨೦—೦ |
| ೭ | ೧—೯-೨೩-೨೦ | ೧೮—೧-೨೩—೦ | ೧೯-೫-೨೩-೨೦ |
| ೮ | ೨—೦-೨೬-೪೦ | ೨೦—೮-೨೬-೪೦ | ೧೮-೬-೨೪-೪೦ |
| ೯ | ೨—೪—೦—೦ | ೨೩—೪—೦—೦ | ೧೭-೪—೦—೦ |

ಈ ಕೋಷ್ಟಕದಂತೆ ಪ್ರತಿಯೊಂದು ಗ್ರಹದ ಶೋಧ್ಯಪಿಂಡವನ್ನು ತಕ್ಕೊಂಡು ಲೆಕ್ಕ ಮಾಡಬೇಕು.

## ಉದಾಹೃತ ಕುಂಡಲಿಯಲ್ಲಿ ಗ್ರಹಗಳ ಶೋಧ್ಯಪಿಂಡಗಳು.

ರವಿ ೨೧೧, ಚಂದ್ರ ೧೯೨, ಮಂಗಳ ೧೧೩, ಬುಧ ೧೭೫, ಗುರು ೮೦, ಶುಕ್ರ ೧೦೮, ಶನಿ ೧೦೮.

ರವಿ – ೨೧೧

| | ವ—ತಿಂ—ದಿ—ಗಳಿಗೆ |
|---|---|
| ೨೦೦ | ೨೪—೧೦—೬—೪೦ |
| ೧೦ | ೨—೭—೩—೨೦ |
| ೧ | ೦—೩—೩—೨೦ |
| ೨೭ ಕ್ಕಿಂತ ಹೆಚ್ಚು ವರ್ಷ ಬಂದರೆ | ೨೭—೮—೧೩—೨೦ |
| ಮಾತ್ರ ೨೭ ಪಜಾ ಮಾಡಬೇಕು. | ೨೭—೦—೦—೦ |

| | | |
|---|---|---|
| | ರವಿ | ೦—೮—೧೩—೨೦ |
| ಹೀಗೆ ಉಳಿದ ಗ್ರಹಗಳದು. | ಚಂ | ೨೨—೯—೧೦—೦ |
| ತೆಗೆಯಬೇಕು. | ಮಂ. | ೨—೩—೧೬—೪೦ |
| ತೆಗೆಯಲಾಗಿ— | ಬು. | ೧೮—೪—೧೩—೦ |
| | ಗು. | ೨೦—೮—೨೬—೪೦ |
| | ಶು. | ೧—೦—೦—೦ |
| | ಶ. | ೩—೭—೩—೨೦ |

ಇನ್ನು ಇದಕ್ಕೆ ಹರಣ ಸಂಸ್ಕಾರ ಕೊಡಬೇಕು. ಒಂದೇ ಮನೆ-ಯಲ್ಲಿ ಹೆಚ್ಚು ಗ್ರಹಗಳಿದ್ದರೆ ಪ್ರತಿಯೊಂದು ಗ್ರಹದ ಆಯುಷ್ಯವನ್ನು

ಅರ್ಧಕ್ಕೆ ಇಳಿಸಬೇಕು. ನೀಚದಲ್ಲಿದ್ದರೂ ಅರ್ಧಮಾಡಬೇಕು. ಅಸ್ತಂಗತವಿದ್ದರೂ ಅರ್ಧ ಮಾಡಬೇಕು. ಶತ್ರುಕ್ಷೇತ್ರದಲ್ಲಿ ೧/೩ ಕಳೆಯಬೇಕು.

೧೨—೧೧—೧೦—೯—೮—೭ ರಲ್ಲಿದ್ದ ಪಾಪ ಗ್ರಹಗಳು ಕ್ರಮವಾಗಿ ಪೂರ್ಣ, ೧/೨ — ೧/೩ — ೧/೪ — ೧/೫ — ೧/೬ ಭಾಗವನ್ನು ಕಳೆದುಕೊಳ್ಳುವವು. ಶುಭ ಗ್ರಹಗಳು ೧೨ ನೆಯ ಭಾವದಿಂದ ಕ್ರಮವಾಗಿ ೧/೨ — ೧/೪ — ೧/೬ — ೧/೮ — ೧/೧೦ — ೧/೧೨ ( ಪಾಪಗ್ರಹಗಳ ಅರ್ಧ ) ಕಳೆದುಕೊಳ್ಳುವವು. ಉದಿತಗೋಲಾರ್ಧದ ಗ್ರಹಗಳ ಆಯುಃ ಹರಣಕ್ಕೆ ಚಕ್ರಪಾತ ಹರಣವೆನ್ನುವರು. ಒಂದು ಗ್ರಹಕ್ಕೆ ಅನೇಕ ಹರಣ ಪ್ರಸಂಗ ಬಂದರೆ ಬಲಿಷ್ಠವಾದ ಹರಣವನ್ನೊಂದೇ ಮಾಡಬೇಕು.

ಚಂದ್ರ-ಸೂರ್ಯರು ಗ್ರಹಣಕಾಲವಿದ್ದರೆ ೧/೩ ಕಳಕೊಳ್ಳುವರು.

ಗ್ರಹಯುದ್ಧವಾಗಿದ್ದರೆ ಅಪಜಯ ಹೊಂದಿದ ಗ್ರಹವು ೧/೩ ಭಾಗವನ್ನು ಕಳೆದುಕೊಳ್ಳುವದು.

### ಹರಣ ಸಂಸ್ಕಾರದ ನಂತರ ಉಳಿಯುವ ವರ್ಷ ಮಾಸಾದಿಗಳು

| | ವರ್ಷ | ತಿಂ. | ದಿ. | ಗಳಿಗೆ |
|---|---|---|---|---|
| ರವಿ | ೦ — | ೪ — | ೬ — | ೪೦ |
| ಚಂ | ೨೨ — | ೯ — | ೧೦ — | ೦ |
| ಮಂ | ೦ — | ೦ — | ೦ — | ೦ |
| ಬು | ೧೫ — | ೪ — | ೮ — | ೦ |
| ಗು | ೨೦ — | ೮ — | ೨೬ — | ೪೦ |
| ಶು | ೦ — | ೮ — | ೦ — | ೦ |
| ಶ | ೧ — | ೯ — | ೧೬ — | ೪೦ |
| | ೩ | ೨ | ೨ | |
| | ೬೧ — | ೮ — | ೮ — | ೦ |

ಇದು ಅಷ್ಟಕವರ್ಗದ ಒಂದು ಪದ್ಧತಿಯಿಂದ ಬರುವ ಆಯುರ್ದಾಯ. ಆದರೆ ಆಯುರ್ದಾಯವನ್ನು ಬೇರೆ ಬೇರೆ ಪದ್ಧತಿಯಿಂದ ಪರೀಕ್ಷಿಸಿ ಕೊನೆಯ ನಿರ್ಣಯ ಮಾಡಬೇಕಾಗುವದು. ಗಂಭೀರ ವಿಷಯವಿರುವದು. ಬೆಂಗಳೂರಿನ ಜಾಗತಿಕ ಖ್ಯಾತಿಯನ್ನು ಪಡೆದ ಜೋತಿರ್ವಿದರಾದ ಬಿ. ವ್ಹಿ. ರಾಮನ್‌ರು ಗಣಿತಾಗತ ಆಯುರ್ದಾಯಕ್ಕಿಂತ ಮಾರಕದಶಾಂತರ್ದಶೆಗಳಿಂದ ನಿರ್ಣಯಿಸುವ ಆಯುಷ್ಯವು ಹೆಚ್ಚು ವಿಶ್ವಸನೀಯವೆಂದು ಹೇಳುವರು. ಮಾರಕದಶಾಂತರ್ದಶೆಗಳ ನಿರ್ಣಯವೂ, ಸಾಮಾನ್ಯ ಜ್ಯೋತಿಷಿಗಳ ಕೈಗೆ ನಿಲುಕಲಾರದು. ಗಣಿತಾಗತ ಆಯುರ್ದಾಯವನ್ನೂ ಅಲಕ್ಷಿಸಲಾಗದು. ಶ್ರೀ ಸೂರ್ಯನಾರಾಯಣರಾಯರು ಹೇಳುವಂತೆ ಅಲ್ಲಿ ವಿಷಮಲಕ್ಷಣಗಳು ಬರಬಹುದು.

## ಹರಣ ಸಂಸ್ಕಾರದ ಆಧಾರಭೂತ ಪದ್ಯಗಳು

ಅನ್ಯೋನ್ಯಾದರ್ಧಹರಣಂ ಗ್ರಹಯುಕ್ತೇ ತು ಕಾರಯೇತ್ ।
ನೀಚೇsರ್ಧಮಸ್ತಗೇsಪ್ಯರ್ಧಂ ಹರಣಂ ತೇಷು ಕಾರಯೇತ್ ।
ಶತ್ರುಕ್ಷೇತ್ರೇ ತ್ರಿಭಾಗೋನಂ ದೃಶ್ಯಾಂಗಹರಣಂ ತಥಾ ।
ರಣಭಂಗೇ ತು ತ್ರ್ಯಂಶೋನಮರ್ಕೇಂದೋಃ
ಪಾತಸಂಶ್ರಯಾತ್ ।
ಬಹುತ್ವ ಹರಣೇ ಪ್ರಾಪ್ತೇ ಕಾರಯೇದ್ಬಲವತ್ತರಂ ।

ಹರಣಪದ್ಯಗಳು ನೆನವು ಉಳಿಯುವದಕ್ಕಾಗಿ, ಬೃಹಜ್ಜಾತಕದ ಪದ್ಯಗಳನ್ನು ನೋಡಬೇಕು. ವರಾಹಮಿಹಿರರ ವಾಯು ಕಾಲಿದಾಸನಂತೆ ವೈದರ್ಭರೀತಿಯಿಂದ ಕೂಡಿದ್ದು ಸುಂದರವಾಗಿರುವದು.

## ಸಾಂಪ್ರದಾಯಿಕವಾದ ಇನ್ನೊಂದು ರೀತಿ

ಪ್ರತಿಯೊಂದು ಗ್ರಹದ ಶೋಧ್ಯಪಿಂಡಕ್ಕೆ, ೭ ರಿಂದ ಗುಣಿಸಿ ೨೭ ರಿಂದ ಭಾಗಿಸಬೇಕು. ಭಾಗಾಕಾರವು ೨೭ ಕ್ಕಿಂತ ಕಡಿಮೆ ಬಂದರೆ ಅಷ್ಟೇ

ವರುಷಗಳನ್ನು ತಕ್ಕೊಳ್ಳಬೇಕು. ೨೭ ಕ್ಕಿಂತ ಹೆಚ್ಚು ಬಂದರೆ ೫೪ ರಲ್ಲಿ ಕಳೆದು ಅಷ್ಟು ವರ್ಷಗಳನ್ನು ತಕ್ಕೊಳ್ಳಬೇಕು. ೫೪ ಕ್ಕಿಂತ ಹೆಚ್ಚು ಬಂದರೆ ೮೧ ರಲ್ಲಿ ಕಳೆದು ಅಷ್ಟು ವರ್ಷಗಳನ್ನು ತಕ್ಕೊಳ್ಳಬೇಕು. ಬಳಿಕ ಹರಣ ಕ್ರಿಯೆಯನ್ನು ಮಾಡಬೇಕು.

## ಉದಾಹೃತ ಕುಂಡಲಿಯಲ್ಲಿ

ರವಿಯ ಶೋಧ್ಯಪಿಂಡ. ೨೧೧ × ೭ =೧೪೭೭ ÷ ೨೭ = ೫೪ ವರ್ಷ ೪ ತಿಂ. ೨೨ ದಿ. ಇದನ್ನು ೮೧ ರಲ್ಲಿ ಕಳೆಯಲಾಗಿ, ೨೬ ವ. ೭ ತಿಂ. ೮ ದಿ. × ½ ರವಿ ಶನಿಯಿಂದ ಕೂಡಿದ್ದಾನೆ.

ಅರ್ಧ ಹರಣ. = ೧೩ ವ. ೩ ತಿಂ. ೧೯ ದಿ. ರವಿಯು ಕೊಟ್ಟ ಆಯುಸ್ಸು. ೧೩ ವ. ೩ ತಿಂ. ೧೯ ದಿ.

ಚಂದ್ರನ ಶೋಧ್ಯಪಿಂಡ. ೧೯೨ × ೭ = ೧೩೪೪ ÷ ೨೭ = ೪೯ ವ. ೯ ತಿಂ. ೧೦ ದಿ. ಇದನ್ನು ೫೪ ರಲ್ಲಿ ಕಳೆಯಲಾಗಿ, ೪ ವ. ೨ ತಿಂ. ೨೦ ದಿ. ಚಂದ್ರ ಕೊಟ್ಟದ್ದು.

ಇಲ್ಲಿ ಹರಣ ಕ್ರಿಯೆ ಇಲ್ಲ. ಚಂದ್ರನು ಚತುರ್ಥದಲ್ಲಿ ಒಬ್ಬನೇ ಇರುವನು.

ಮಂಗಳನ ಶೋಧ್ಯಪಿಂಡ. ೧೧೩ × ೭ = ೭೯೧ ÷ ೨೭ = ೨೯ ವ. ೩ ತಿಂ. ೧೬ ದಿ. ಇದನ್ನು ೫೪ ರಲ್ಲಿ ಕಳೆಯಲಾಗಿ, = ೨೪ ವರ್ಷ ೮ ತಿಂ. ೧೪ ದಿ. ಮಂಗಳನು ೧೨ ರಲ್ಲಿರುವನು. ಸಂಪೂರ್ಣ ಹರಣ ಮಾಡುವನು.

ಮಂಗಳನು ಕೊಟ್ಟ ಆಯುಸ್ಸು: ೦ ವ. ೦ ತಿಂ. ೦ ದಿ.

ಬುಧನ ಶೋಧ್ಯಪಿಂಡ. ೧೭೫ × ೭ = ೧೨೨೫ ÷ ೨೭ = ೪೫ ವರ್ಷ ೪ ತಿಂ. ೧೩ ದಿ. ೫೪ ರಲ್ಲಿ ವಜಾ ಮಾತಲಾಗಿ, ೮—೭—೧೭ ಬುಧನದು.

ಬುಧನು ೧೦ ನೇ ಮನೆಯಲ್ಲಿರುವನು. ೧/೩ ಹರಣ = ೭ ವ. ೨ ತಿಂ. ೯ ದಿ. ಬುಧ ಕೊಟ್ಟದ್ದು.

ಗುರುವಿನ ಶೋಧ್ಯಪಿಂಡ. ೮೦ × ೭ = ೫೬೦ ÷ ೨೭ = ೨೦ ವರ್ಷ ೮ ತಿಂ. ೨೬ ದಿ. ೨೭ ಕ್ಕಿಂತ ಕಡಿಮೆ ಇರುವದರಿಂದ ಕಳೆಯುವ ಕಾರಣ ವಿಲ್ಲ. ಹರಣ ಕ್ರಿಯೆಯೂ ಇಲ್ಲ. ಗುರು ಅನುದಿತ ಗೋಲಾರ್ಧದಲ್ಲಿರುವನು.

ಶುಕ್ರನ ಶೋಧ್ಯಪಿಂಡ. ೧೦೮ × ೭ = ೭೫೬ ÷ ೨೭ = ೨೮. ೫೪—೨೮ = ೨೬ ಶುಭಗ್ರಹ ೧೨ ರಲ್ಲಿರುವನು. ಕಾರಣ ಅರ್ಧ ಹರಣ- ೧೩ ವರ್ಷಗಳು ಶುಕ್ರ ಕೊಟ್ಟದ್ದು.

ಶನಿಯ ಶೋಧ್ಯಪಿಂಡ. ೧೧೮ × ೭ = ೯೨೬ ÷ ೨೭ = ೩೦ ವರ್ಷ ೨ ತಿಂ. ೩ ದಿ. ೫೪ ವ. ೩ ತಿಂ. ೭ ದಿ. ೩ = ೨೩ ವ. ೪ ತಿಂ. ೨೭ ದಿ. ಇವನು ರವಿಯುಕ್ತ. ಕಾರಣ ಅರ್ಧ ಹರಣ. ೧೧ ವ. ೮ ತಿಂ. ೧೩ ದಿ. ಶನಿ ಕೊಟ್ಟದ್ದು.

| | ವರ್ಷ | ತಿಂ. | ದಿ. |
|---|---|---|---|
| ರವಿ | ೧೩ | ೩ | ೧೯ |
| ಚಂ. | ೪ | ೨ | ೨೦ |
| ಮಂ. | ೦ | ೦ | ೦ |
| ಬು. | ೭ | ೨ | ೯ |
| ಗು. | ೨೦ | ೮ | ೨೬ |
| ಶು. | ೧೩ | ೦ | ೦ |
| ಶನಿ | ೧೧ | ೮ | ೧೩ |
| | ೭೦ | ೧ | ೨೭ |

ಇವು ನಕ್ಷತ್ರ ವರ್ಷಗಳು. ಇದಕ್ಕೆ ೩೨೪ ರಿಂದ ಗುಣಿಸಿ, ೩೬೫ ರಿಂದ ಭಾಗಿಸಲಾಗಿ, ಸೌರ ವರ್ಷಗಳು ಬರುವವು. ೬೨ ವರ್ಷ ೨ ತಿಂ. (ಸುಮಾರು). ಇದು ಸಾಂಪ್ರದಾಯಿಕ ವಾದಿಗಳ ಒಂದು ಮತ.

ಹರಣಕ್ರಿಯೆಯು ರೀತಿ ಹಿಂದೆ ಬಂದಿರುವದು.

---

# ದೈನಿಕ ಭವಿಷ್ಯವನ್ನು ಹೇಳುವ ಬಗೆ

## ( ಅಷ್ಟಕವರ್ಗ ಪದ್ಧತಿಯಿಂದ )

ಇಷ್ಟ ದಿನದಲ್ಲಿ ಪಂಚಾಂಗವನ್ನು ನೋಡಿ ರವಿ-ಚಂದ್ರಾದಿ ಗ್ರಹಗಳು ಯಾವ ರಾಶಿಯಲ್ಲಿರುವವೋ ನೋಡಿಕೊಳ್ಳಿರಿ. ಆ ದಿವಸ ಸೂರ್ಯಾದಿ ವೈಯಕ್ತಿಕ ಅಷ್ಟಕವರ್ಗದಲ್ಲಿ, ಆ ರಾಶಿಯಲ್ಲಿ ಆ ಗ್ರಹದ ಬಿಂದುಗಳು ಎಷ್ಟಿರುವವೋ ಅವನ್ನು ಎಣಿಸಿರಿ. ಹೀಗೆ ರವಿಯ ಅಷ್ಟಕವರ್ಗದಲ್ಲಿ ರವಿಯು ಇಂದು ಸಂಚರಿಸುವ ರಾಶಿಯಲ್ಲಿರುವ ಬಿಂದುಗಳು, ಚಂದ್ರನು ಇಂದು ಸಂಚರಿಸುವ ರಾಶಿಯಲ್ಲಿ ಚಂದ್ರನ ಅಷ್ಟಕವರ್ಗದಲ್ಲಿ ಬಿಂದುಗಳೆಷ್ಟು? ಹೀಗೆ ೭ ಗ್ರಹಗಳ ಬಿಂದುಗಳನ್ನು (ಆ ದಿನದ ರಾಶಿಗಳಲ್ಲಿರುವ) ಕೂಡಿಸಲಾಗಿ, ೨೭ ಕ್ಕಿಂತ ಹೆಚ್ಚು ಬಿಂದುಗಳಾದರೆ, ಆ ದಿನವು ನಿಮಗೆ ಶುಭವನ್ನುಂಟು ಮಾಡುವದು. ಬಿಂದುಗಳ ಸಂಖ್ಯೆಯಿಂದ ಫಲಗಳನ್ನು ಗ್ರಂಥಕಾರರು ಹೇಳಿರುವರು.

| | | |
|---|---|---|
| ೧೪ | ಬಿಂದುಗಳಾದರೆ | ಧರ್ಮಹಾನಿ ಅಥವಾ ಕರ್ತವ್ಯಚ್ಯುತಿ. |
| ೧೫ | ,, | ಆಪತ್ತು. |
| ೧೬ | ,, | ಸರಕಾರದ ಅಪ್ರೀತಿ, ವರಿಷ್ಠ ಅಧಿಕಾರಿಗಳ ಕೋಪ. |
| ೧೭ | ,, | ನಾಶ, ಹಾನಿ. |
| ೧೮ | ,, | ಧನಹಾನಿ. |
| ೧೯ | ,, | ದುರ್ಬುದ್ಧಿ, ಬಂಧು ಪೀಡೆ. |
| ೨೦ | ,, | ವ್ಯಯ, ಕಲಹ. |
| ೨೧ | ,, | ಮಾನಸಿಕ ತ್ರಾಸ. |

| | | |
|---|---|---|
| ೨೨ | ಬಿಂದುಗಳಾದರೆ | ಪರಾಭವ, ಫಲಶೂನ್ಯತೆ, ದೈನ್ಯ. |
| ೨೩ | ,, | ಧರ್ಮ, ಅರ್ಥಗಳ ಹಾನಿ. |
| ೨೪ | ,, | ಆಕಸ್ಮಿಕ ಧನಹಾನಿ. |
| ೨೫ | ,, | ಕೈಯಲ್ಲಿರುವ (ಕರಗತ) ಧನಹಾನಿ. |
| ೨೬ | ,, | ಕಲಹ. |
| ೨೭ | ,, | ಸಮತೆ |
| ೨೮ | ,, | ಧನಾಗಮ. |
| ೨೯ | ,, | ಜನಪೂಜ್ಯತೆ (ಸತ್ಕಾರ ಸಮಾರಂಭಗಳು). |
| ೩೦ | ,, | ಒಳ್ಳೇ ಕಾರ್ಯಗಳು, ಸೌಖ್ಯ, ಸರಕಾರದಿಂದ ಮರ್ಯಾದೆ. |
| ೩೧ | ,, | ದ್ರವ್ಯ, ಸನ್ಮಾನ. |
| ೩೨ | ,, | ಸರ್ವಸಿದ್ಧಿ, ಮಹಾಲಾಭ. |
| ೩೩ | ,, | ಮಹಾಲಾಭ. |
| ೩೪ ರಿಂದ ೫೬ ರ ವರೆಗೆ | | ಅಭ್ಯುದಯ, ಏಳಿಗೆ, ಅರ್ಥಾಗಮ. ಸಂಖ್ಯೆ ಬೆಳೆದಂತೆ ಹೆಚ್ಚು ಹೆಚ್ಚು ಲಾಭ, ಬೆಳವಣಿಗೆ. |

ಪರಾಶರ ಋಷಿ ೭ ಬಿಂದುಗಳಿಂದ ಫಲಗಳನ್ನು ಹೇಳುವನು. ಅನಿಷ್ಟ ಫಲಗಳಿಗೆ ನಿವಾರಣೋಪಾಯವನ್ನು ಸೂಚಿಸುವನು. ಇಂದಿನ ಅಶ್ರದ್ಧೆಯ ದಿನಗಳಲ್ಲಿ ಸಮರ್ಥರೂ ಆ ಉಪಾಯವನ್ನೇ ಕೈಕೊಳ್ಳುವದಿಲ್ಲ. ಇರಲಿ.

೭ ಬಿಂದುಗಳಿಂದ ಕೂಡಿದ್ದರೆ ಮೃತ್ಯುಭಯ. (ಸಂಕ್ರಮಣ ಕುಂಡಲಿಗಳಿಂದ ಮಾಸಭವಿಷ್ಯವನ್ನು ಹೇಳಬಹುದು.) ಭಯ ನಿವಾರಣೆಗೆ— ೨೦ ಪಲ ಸುವರ್ಣದಾನ. ೨ ತಿಲಪರ್ವತಗಳನ್ನು ದಾನ ಮಾಡಬೇಕು. (ಅಥವಾ ಬಡವರು ೨ ಎಳ್ಳುಂಡಿಗಳನ್ನು ಕೊಡಬಹುದು)

೮ ಬಿಂದುಗಳಿದ್ದರೆ, ಜಾತಿಹೀನನಾಗಿ ಬೇಗ ಮೃತ್ಯುವನ್ನು ಹೊಂದುವನು.

'ಅಸತ್‌ಫಲವಿನಾಶಾಯ ದದ್ಯಾತ್ ಕರ್ಪೂರಜಾಂ ತುಲಾಂ.' ಈ ಅಸತ್ ಫಲನಾಶಕ್ಕಾಗಿ ಕರ್ಪೂರದ (ಪ್ಲಾಸ್ಟಿಕ್) ತಕ್ಕಡಿಯನ್ನು ದಾನ ಮಾಡಬೇಕು.

೯ ಬಿಂದುಗಳಾದರೆ ಸರ್ಪದಿಂದ ಸಾವು. ಅಶುಭಫಲ ನಿವಾರಣೆಗೆ ೪ ಕುದುರೆಗಳಿಂದ ಯುಕ್ತವಾದ ರಥವನ್ನು ದಾನಮಾಡಬೇಕು. (ಮೋಟಾರ ಕಾರ ಕೊಟ್ಟರೂ ಅಡ್ಡಿಯಿಲ್ಲ.)

೧೦ ಬಿಂದುಗಳಿಂದ ಶಸ್ತ್ರಗಳಿಂದ ಪ್ರಾಣತ್ಯಾಗ. ನಿವಾರಣೆಗೆ ವಜ್ರ-ಸಂಯುಕ್ತ ಕವಚದಾನ.

೧೧ ಬಿಂದುಗಳಿಂದ ಶಾಪದಿಂದ ಮೃತ್ಯು. ನಿವಾರಣೆಗೆ ೮ ಪಲಗಳಿಂದ ಸುವರ್ಣಘಟಿತ ಚಂದ್ರಪ್ರತಿಮೆಯನ್ನು ದಾನ ಮಾಡಬೇಕು.

೧೨ ಬಿಂದುಗಳಿಂದ ಜಲದೋಷದಿಂದ ಮೃತ್ಯು. ಬ್ರಾಹ್ಮಣನಿಗೆ ಭೂಮಿದಾನಮಾಡಬೇಕು. ಮಾಡಿದಲ್ಲಿ ಶುಭಫಲ ಪ್ರಾಪ್ತಿ.

೧೩ ಬಿಂದುಗಳಿಂದ ಹುಲಿಯಿಂದ ಮೃತ್ಯು. ಶುಭಫಲ ಪ್ರಾಪ್ತಿಗಾಗಿ ಹಿರಣ್ಯಗರ್ಭವಿಷ್ಣು ಪ್ರತಿಮೆಯನ್ನು ದಾನಮಾಡಬೇಕು.

೧೪ ಬಿಂದುಗಳಿಂದ, ಚಕ್ರದಿಂದ ಪ್ರಾಣಹಾನಿ. ಕನಕ ನಿರ್ಮಿತ ವರಾಹ ಪ್ರತಿಮೆಯನ್ನು ದಾನಮಾಡಬೇಕು.

೧೫ ಬಿಂದುಗಳಿಂದ ರಾಜಭಯ. ಗಜದಾನ ಮಾಡಬೇಕು.

೧೬ ಬಿಂದುಗಳಿಂದ ರಾಜಭಯ. ಕಲ್ಪವೃಕ್ಷದ ಪ್ರತಿಮೆಯ ದಾನ-ದಿಂದ ಪರಿಹಾರ.

೧೭ ಬಿಂದುಗಳಿಂದ ವ್ಯಾದಿಭಯ. ಬೆಲ್ಲದ ಆಕಳ ದಾನ ಮಾಡ-ಬೇಕು.

೧೮ ಬಿಂದುಗಳಿಂದ ಕಲಹ. ರತ್ನ-ಗೋ-ಭೂಮಿ-ಹಿರಣ್ಯದಾನ.

೧೯ ,, ದೇಶತ್ಯಾಗ. ವಿಧಿಯಿಂದ ಶಾಂತಮಾಡಬೇಕು.

೨೦ ಬಿಂದುಗಳಿಂದ ಬುದ್ಧಿಭ್ರಂಶ. ಲಕ್ಷಜಪ ಮಾಡಬೇಕು.

೨೧ ,, ರೋಗ ಪೀಡಾ. ಧಾನ್ಯರಾಶಿ ದಾನಮಾಡಬೇಕು.

೨೨ ,, ಬಂಧು ಪೀಡೆ. ಕನ್ನಡಿ ದಾನದಿಂದ ಪರಿಹಾರ. ಉತ್ತಮ ಚಾಳೀಸ (ಕನ್ನಡಕ) ವನ್ನು ದಾನ ಮಾಡಬೇಕು.

೨೩ ,, ಮನಃಕ್ಲೇಶ. ೭ ಫಲ ಸುವರ್ಣದಿಂದ ರವಿ ಪ್ರತಿಮೆ ಮಾಡಿಸಿ ದಾನ ಮಾಡಿರಿ.

೨೪ ,, ಬಂಧು ಪೀಡೆ. ೧೦ ಆಕಳುಗಳನ್ನು ದಾನ ಮಾಡಿರಿ.

೨೫ ,, ರೋಗ ಪೀಡೆ. ಜಪ, ಹೋಮ ಮಾಡಿಸಬೇಕು.

೨೬ ,, ಬುದ್ಧಿನಾಶ. ಸರಸ್ವತೀ ಪೂಜೆ ಮಾಡಿಸಬೇಕು.

೨೭ ,, ಧನಕ್ಷಯ. ಶ್ರೀಸೂಕ್ತವನ್ನು ಪಠಿಸಬೇಕು.

೨೮ ,, ಹಾನಿಯೂ ಉಂಟು. ಲಾಭವೂ ಇಲ್ಲ. ಸೂರ್ಯಹೋಮ ಮಾಡಿಸಬೇಕು.

೨೯ ,, ಚಿಂತಾವ್ಯಾಕುಲತೆ. ಘೃತ, ವಸ್ತ್ರ, ಸುವರ್ಣದಾನ ಮಾಡಿಸಬೇಕು.

೩೦ ,, ಧನಧಾನ್ಯಗಳ ಸಂಪ್ರಾಪ್ತಿ.

೩೧ ,, ಮಹಾ ಉದ್ಯೋಗ. ಮಿತ್ರವರ್ಗದಿಂದ ಕೂಡಿಕೊಳ್ಳುವನು.

೩೨ ,, ಮಹಾ ಉತ್ಸಾಹ. ಪುತ್ರ ಸಂಪತ್ತು.

೩೩ ,, ವಸ್ತ್ರ ಲಾಭ.

ಉದಾಹರಣೆ — ೨೦ – ೧೨ – ೧೯೫೮. ದೈನಿಕ ಗ್ರಹಗಳು.




ರವಿಗೆ ಅವನ ಅಷ್ಟಕವರ್ಗದಲ್ಲಿ (ಧನುರಾಶಿಯಲ್ಲಿ) ೫ ಬಿಂದುಗಳಿರುವವು.

ಚಂದ್ರನಿಗೆ ಅವನ ಅಷ್ಟಕವರ್ಗದಲ್ಲಿ ೨ ,,

[ಉದಾಹೃತ ಕುಂಡಲಿಯಲ್ಲಿ, ಮೇಷದಲ್ಲಿ.]

ಮಂಗಳನಿಗೆ ಅವನ ಅಷ್ಟಕವರ್ಗದಲ್ಲಿ (ಮೇಷದಲ್ಲಿ) ೩ ,,

ಬುಧನಿಗೆ ಅವನ ಅಷ್ಟಕವರ್ಗದಲ್ಲಿ (ವೃಶ್ಚಿಕದಲ್ಲಿ) ೬ ,,

ಗುರುವಿಗೆ ಅವನ ,, (ತುಲಾದಲ್ಲಿ) ೫ ,,

ಶುಕ್ರನಿಗೆ " ,, (ಧನುದಲ್ಲಿ) ೬ ,,

ಶನಿಗೆ " ,, ( ,, ) ೩ ,,

೩೦

೨೦-೧೨-೫೮ ದಿನಾಂಕ.

೩೦ ಬಿಂದುಗಳಾಗುವವು

ತ್ರಿಂಶತಾಧನ ಧಾನ್ಯಾಪ್ತಿರಿತಿ ಜಾತಕನಿರ್ಣಯಃ
ತ್ರಿಂಶತಾ ಮಾನಮಿತ್ರಪ್ರಾಪ್ತಿಃ ಮಾನಂ ಸುಕೃತಪ್ರಾಪ್ತಿಃ
ತ್ರಿಂಶತ್ಯಾ ।

೨೭ ರಿಂದ ಮುಂದೆ ಶುಭಫಲ ಪ್ರಾಪ್ತಿಯೆಂದು ಜಾತಕ ಸಾರ ದೀಪವು ಹೇಳುತ್ತದೆ. ಇದರಂತೆ ಮಾನಸಸಾಗರಿಯ ಅಭಿಪ್ರಾಯವಿರುವದು.

೪೦ ಬಿಂದುಗಳಿಂದ ಯಶಃ ಪ್ರಾಪ್ತಿ, ಪುಣ್ಯ ಸಂಪಾದನೆ. ಅದಕ್ಕಿಂತ ಹೆಚ್ಚಿಗೆ ರಾಜ್ಯಪ್ರಾಪ್ತಿ. ಇತ್ಯಾದಿ.

ಒಟ್ಟಿಗ್ರಹಗಳ ಅಷ್ಟಕವರ್ಗವನ್ನು ಕಾಳಜಿಯಿಂದ ಮಾಡಿದಲ್ಲಿ, ದೈನಿಕ ಭವಿಷ್ಯವನ್ನು ಹೇಳುವದು ಸುಲಭವಾಗುವದು. ಇದರಿಂದ ನಾರಭವಿಷ್ಯ-ಗಳು, ಈಗಿನ ವೃತ್ತಪತ್ರಗಳಲ್ಲಿ ಪ್ರಕಟವಾಗುವದು ವ್ಯರ್ಥವೆಂದು ಸಿದ್ಧ-ವಾಗುವದಿಲ್ಲವೇ ?



# ರಾಶಿ ಸ್ವರೂಪ

ಈ ಪುಸ್ತಕದಲ್ಲಿ ವರ್ಣಿತವಾದ ಅಷ್ಟಕವರ್ಗ ಪದ್ಧತಿಯು ಹೋರಾ-ಶಾಸ್ತ್ರಜ್ಞರಲ್ಲಿ ಮಾನ್ಯವಾದ ಒಂದು ವಿಶಿಷ್ಟ ಪದ್ಧತಿ. ಈ ಪದ್ಧತಿಯನ್ನು ತಿಳಿದುಕೊಳ್ಳುವ ಮೊದಲು ಕೆಲವು ಪ್ರಾಥಮಿಕ ಜ್ಞಾನವು ಆವಶ್ಯಕವಾಗಿದೆ. ಅವನ್ನು ಈ ಭಾಗದಲ್ಲಿ ವಿವರಿಸುವೆವು. ಕ್ರಾಂತಿವೃತ್ತದಲ್ಲಿ ೩೬೦ ಅಂಶಗಳು. ೧೨ ಭಾಗಗಳನ್ನು ಮಾಡಿ ೩೦-೩೦ ಅಂಶಕ್ಕೆ ಒಂದೊಂದು ರಾಶಿಗಳು. ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ, ಮೀನ—ಇವು ಹನ್ನೆರಡು ರಾಶಿಗಳು. ಮೇಷಕ್ಕೆ ಕ್ರಿಯ, ವೃಷಭಕ್ಕೆ ತಾವುರಿ, ಮಿಥುನಕ್ಕೆ ಜಿತುಮ, ಕರ್ಕಕ್ಕೆ ಕುಲೀರ, ಸಿಂಹಕ್ಕೆ ಲೇಯ, ಕನ್ಯಾಕ್ಕೆ ಪಾಥೋನ, ತುಲಾಕ್ಕೆ ಜೂಕ, ವೃಶ್ಚಿಕಕ್ಕೆ ಕೌರ್ಪ್ಯ, ಧನುಕ್ಕೆ ತೌಕ್ಷಿಕ, ಮಕರಕ್ಕೆ ಆಕೋಕೇರ, ಕುಂಭಕ್ಕೆ ಹೃದ್ರೋಗ, ಮೀನಕ್ಕೆ ಅಂತ್ಯಭ ಎಂಬ ಹೆಸರುಗಳು ಇರುವವು.

## ಮೇಷಾದಿ ರಾಶಿಯು ಅಧಿಪತಿಗಳು

ಕ್ಷಿತಿಜ ಸಿತಜ್ಞ ಚಂದ್ರ ರವಿ ಸೌಮ್ಯ ಸಿತಾವನಿಜಾಃ ।
ಸುರಗುರು ಮಂದಸೌರಿ ಗುರವಶ್ಚ ಗೃಹಾಧಿಪಾಃ ।

| ರಾಶಿ | ಅಧಿಪತಿ | ರಾಶಿ | ಅಧಿಪತಿ |
|---|---|---|---|
| ಮೇಷ | ಮಂಗಳ | ತುಲಾ | ಶುಕ್ರ |
| ವೃಷಭ | ಶುಕ್ರ | ವೃಶ್ಚಿಕ | ಮಂಗಳ |
| ಮಿಥುನ | ಬುಧ | ಧನು | ಗುರು |
| ಕರ್ಕ | ಚಂದ್ರ | ಮಕರ | ಶನಿ |
| ಸಿಂಹ | ರವಿ | ಕುಂಭ | ಶನಿ |
| ಕನ್ಯಾ | ಬುಧ | ಮೀನ | ಗುರು |

## ನವಾಂಶಾಧಿಪತಿಗಳು

ಅಜಮೃಗತೌಲಿ ಚಂಪ್ರಭವನಾದಿ ನವಾಂಶವಿಧಿಃ ।
ಭವನಸಮಾಂ ಶಕಾಧಿಪತಯಃ ಸ್ವಗೃಹಾತ್ ಕ್ರಮಶಃ

ರಾಶಿಯಲ್ಲಿ ೯ ಭಾಗಗಳನ್ನು ಮಾಡಿದರೆ ನವಾಂಶವೆನ್ನುವರು. $3\frac{1}{3}$ ಅಂಶಕ್ಕೆ ೧ ನವಾಂಶ. ೨ ನೇ ನವಾಂಶ $6\frac{2}{3}$ ವರೆಗೆ. ೧೦ ಪೂರ್ಣ ೩ನೇ ನವಾಂಶ. $13\frac{1}{3}$ ೪ನೇ ನವಾಂಶ—ಹೀಗೆ ೨೦ ಕ್ಕೆ ೬ ನೇ ನವಾಂಶ ಮುಗಿಯುವದು. ೩೦.ಕ್ಕೆ ೯ ನವಾಂಶ ಮುಗಿವುದು.

ನವಾಂಶವನ್ನು ಎಣಿಸುವ ರೀತಿ— ಮೇಷಕ್ಕೆ ಮೇಷದಿಂದ ವೃಷಭಕ್ಕೆ ಮಕರದಿಂದ, ಮಿಥುನಕ್ಕೆ ತುಲೆಯಿಂದ, ಕರ್ಕಕ್ಕೆ ಕರ್ಕದಿಂದ, ಸಿಂಹಕ್ಕೆ ಪುನಃ ಮೇಷದಿಂದ ಆ ರಾಶಿಯ ಅಧಿಪತಿಗಳೇ ನವಾಂಶಾಧಿಪತಿಗಳಾಗುವವು.

## ಹೋರಾಧಿಪತಿಗಳು

ವಿಷಮರಾಶಿಗೆ ಪೂರ್ವಾರ್ಧ ಸೂರ್ಯ; ಉತ್ತರಾರ್ಧ ಚಂದ್ರ ಅಧಿಪತಿ. ಸಮ ರಾಶಿಗಳಲ್ಲಿ ಪೂರ್ವಾರ್ಧಕ್ಕೆ ಚಂದ್ರ, ಉತ್ತರಾರ್ಧಕ್ಕೆ ರವಿ ಅಧಿಪತಿಗಳು. ದ್ವಾದಶಾಂಶದಲ್ಲಿ ರಾಶಿಕ್ರಮದಿಂದಲೇ ಆ ಅಂಶಗಳ ಅಧಿಪತಿಗಳಾಗುವರು.

ಗೋಜಾಶ್ವಿ ಕರ್ಕಿಮಿಥುನಾಃ ಸಮೃಗಾಃ ನಿಶಾಖ್ಯಾಃ ।
ಪೃಷ್ಠೋದಯಾ ವಿಮಿಥುನಾಃ ಕಥಿತಾಸ್ತ ಏವ ।
ಶೀರ್ಷೋದಯಾ ದಿನಬಲಾಶ್ಚ ಭವಂತಿ ಶೇಷಾಃ ।
ಲಗ್ನಂ ಸಮೇತ್ಯುಭಯತಃ ಪೃಥುರೋಮಯುಗ್ಮಂ ।

ವೃಷಭ, ಮೇಷ, ಧನು, ಕರ್ಕ, ಮಿಥುನ, ಮಕರ ರಾಶಿಗಳು ರಾತ್ರಿ ಬಲಶಾಲಿಗಳು. ಮಿಥುನ ಬಿಟ್ಟು ಉಳಿದ ರಾಶಿಗಳು ( ವೃಷಭ, ಮೇಷ, ಧನು, ಕರ್ಕ, ಮಕರ ) ರಾಶಿಗಳು ಪೃಷ್ಠೋದಯ ರಾಶಿಗಳು. ಸಿಂಹ, ಕನ್ಯಾ, ತುಲಾ, ವೃಶ್ಚಿಕ ಕುಂಭ, ರಾಶಿಗಳು ದಿವಾಬಲಿ ರಾಶಿಗಳು. ಮತ್ತು ಶಿರ್ಷೋದಯ ರಾಶಿಗಳು. ಮೀನವೊಂದು ಉಭಯೋದಯ, ಉಭಯಕಾಲದಲ್ಲಿ (ದಿವಾ ರಾತ್ರಿ) ಬಲವುಳ್ಳದ್ದು.

ಮೇಷಾದಿ ರಾಶಿಗಳಿಗೆ ಕ್ರಮವಾಗಿ ಕ್ರೂರ, ಸೌಮ್ಯ ಸಂಜ್ಞೆಗಳು ಪುರುಷ-ಸ್ತ್ರೀ ಸಂಜ್ಞೆಗಳೂ ಇರುತ್ತವೆ. ಅವು ಕ್ರಮವಾಗಿ ಚರ, ಸ್ಥಿರ, ದ್ವಿಸ್ವಭಾವ ಸಂಜ್ಞೆಗಳನ್ನು ಹೊಂದುವವು. ಮೇಷ, ಸಿಂಹ, ಧನು ರಾಶಿಗಳು ಪೂರ್ವದಿಕ್ಕನ್ನೂ, ವೃಷಭ, ಕನ್ಯಾ, ಮಕರಗಳು ದಕ್ಷಿಣದಿಕ್ಕನ್ನೂ, ಮಿಥುನ, ತುಲಾ, ಕುಂಭಗಳು ಪಶ್ಚಿಮದಿಕ್ಕನ್ನೂ, ಕರ್ಕ, ವೃಶ್ಚಿಕ, ಮೀನಗಳು ಉತ್ತರ ದಿಕ್ಕನ್ನೂ ಸೂಚಿಸುವವು.

**ಅಜವೃಷಭ ಮೃಗಾಂಗನಾ ಕುಲೀರಾ ॥**
**ಝಷವಣಿಜೌ ಚ ದಿವಾಕರಾದಿ ತುಂಗಾಃ ।**

**ದಶ – ಶಿಖಿ ಮನು ಯುಕ್ ತಿಥೀಂದ್ರಿಯಾಂಶೈಃ ।**
೧೦ ೩ ೨೮ ೧೫ ■
**ತ್ರಿ– ನವಕ ವಿಂಶತಿಭಿಶ್ಚ ತೇಸ್ತ ನೀಚಾಃ ॥**
೨೭ ೨೦

ಮೇಷ, ವೃಷಭ, ಮಕರ, ಕನ್ಯಾ, ಕರ್ಕ, ಮೀನ, ತುಲೆಗಳು ರವ್ಯಾದಿ ಗ್ರಹಗಳಿಗೆ ಉಚ್ಚರಾಶಿಗಳು. ಅವು ಕ್ರಮವಾಗಿ ೧೦–೩–೨೮–೧೫–೫–೨೭–೨೦ ನೇ ಅಂಶಗಳಲ್ಲಿ ಪರಮೋಚ್ಚದಲ್ಲಿರುವವು. ಈ ರಾಶಿ-ಯಿಂದ ೭ ನೆಯ ರಾಶಿ ಅವುಗಳಿಗೆ ನೀಚರಾಶಿ; ತದ್ಗತ ಅಂಶ ಪರಮ ನೀಚಾಂಶ.

ಮೂಲ ತ್ರಿಕೋನ— **ಸಿಂಹೋ ವೃಷಃ ಪ್ರಥಮ ಷಷ್ಠ ಹಯಾಂಗ ತೌಲಿ । ಕುಂಭಾಸ್ತ್ರಿಕೋಣ ಭವನಾನಿ ಭವಂತಿ ಸೂರ್ಯಾತ್ ।**

ರವಿಗೆ ಸಿಂಹ. ಚಂದ್ರನಿಗೆ ವೃಷಭ, ಮಂಗಲನಿಗೆ ಮೇಷ, ಬುಧನಿಗೆ ಕನ್ಯಾ, ಗುರುವಿಗೆ ಧನು, ಶುಕ್ರನಿಗೆ ತುಲಾ, ಶನಿಗೆ ಕುಂಭ ಇವುಗಳು ಮೂಲ ತ್ರಿಕೋನ ರಾಶಿಗಳು. ಇಲ್ಲಿ ಗ್ರಹಗಳಿಗೆ ೭೫% ಬಲವಿರು-ವದು.

**ಷಷ್ಠಂ ತೃತೀಯಂ ದಶಮಂ ಚ ರಾಶಿಂ ।**
**ಏಕಾದಶಂ ಚೋಪಚಯರ್ಕ್ಷಮಾಹುಃ ।**

೬-೩–೧೦–೧೧ ನೆಯ ರಾಶಿಗಳನ್ನು ಲಗ್ನದಿಂದ ಅಥವಾ ಚಂದ್ರನಿಂದ ಉಪಚಯ ರಾಶಿಗಳೆಂದು ಕರೆಯುವರು.

ಲಗ್ನ, ಸಪ್ತಮ, ಚತುರ್ಥ, ದಶಮ ಭಾವಗಳಿಗೆ, ಕಂಟಕ, ಕೇಂದ್ರ ಚತುಷ್ಟಯ ಎಂದು ಹೆಸರು. ಸಪ್ತಮದಲ್ಲಿ ವೃಶ್ಚಿಕ, ಲಗ್ನದಲ್ಲಿ ಮನುಷ್ಯ ರಾಶಿ ( ತುಲಾ, ಕನ್ಯಾ, ಮಿಥುನ, ಧನು, ಪೂರ್ವಾರ್ಧ )

ಚತುರ್ಥದಲ್ಲಿ ಜಲಚರ ( ಕರ್ಕ, ಮೀನ, ಮಕರೋತ್ತರಾರ್ಧ ) ದಶಮ-ದಲ್ಲಿ ಪಶುರಾಶಿ. ( ಸಿಂಹ, ಮೇಷ, ವೃಷಭ, ಧನುವಿನ ಉತ್ತರಾರ್ಧ ) ಬಲಿಷ್ಠವಿರುತ್ತವೆ.

ಕುಂಡಲಿಯಲ್ಲಿ ೧-೪-೭-೧೦ ನೆಯ ಮನೆಗಳು ಕೇಂದ್ರಗಳು; ೨-೫-೮-೧೧ ನೆಯ ಮನೆಗಳು ಪಣಫರ. ೩-೬-೯-೧೨ ನೆಯ ಮನೆಗಳು ಅಪ್ರೋಕ್ಲೀಮ.

೫-೯ ನೆಯ ಮನೆಗಳು ತ್ರಿಕೋಣಗಳು. ೧ ನೆಯ ಮನೆ ತ್ರಿಕೋಣದಲ್ಲಿ, ಕೇಂದ್ರದಲ್ಲಿ ಎರಡರಲ್ಲಿ ಬರುವುದು. ಆದ್ದರಿಂದ ಲಗ್ನಕ್ಕೆ ಹೆಚ್ಚು ಮಹತ್ವವಿರುವದು.

ಲಗ್ನವು ತನ್ನ ಒಡೆಯನಿಂದ ಅಥವಾ ಗುರು-ಬುಧರಿಂದ ದೃಷ್ಟ-ವಾಗಿದ್ದರೆ ಅದಕ್ಕೆ ಬಲ ಬರುವದು. ಇತರ ಗ್ರಹಗಳಿಂದ ದೃಷ್ಟವಾಗಿ-ಬಾರದು.

ಲಗ್ನಾಧಿಪತಿಯ ದ ಬುಧ-ಗುರುಗಳಿಂದಲೂ ಅನ್ಯಗ್ರಹಗಳಿಂದಲೂ ದೃಷ್ಟವಾಗಿದ್ದರೆ ಮಿಶ್ರಬಲ.

**ಮಿಥುನ ತುಲಿ ಕುಂಭ ಕನ್ಯಾ ದಿವಾಬಲಾ ಧನ್ವಿ.**
**ನಶ್ಚ ಪೂರ್ವಾರ್ಧಂ ।**
**ಅಜವೃಷಸಿಂಹಾ ರಾತ್ರೌ ಮೃಗಝಷಯೋಃ ಪೂರ್ವಪಶ್ಚಾರ್ಧೇ ।**

ಮಿಥುನ, ತುಲಾ, ಕನ್ಯಾ, ಕುಂಭ, ಧನುವಿನ ಪೂರ್ವಾರ್ಧ ಈ ರಾಶಿಗಳಿಗೆ ಹಗಲು ಬಲವಿರುವದು. ( ದಿವಾಬಲಿ ರಾಶಿಗಳು ). ಮೇಷ, ವೃಷಭ, ಸಿಂಹ, ಧನುವಿನ ಉತ್ತರಾರ್ಧ, ಮಕರದ ಪೂರ್ವಾರ್ಧ ಈ ರಾಶಿಗಳಿಗೆ ರಾತ್ರಿ ಬಲವಿರುವದು.

ವೃಶ್ಚಿಕ, ಮೀನ, ಕರ್ಕ, ಮಕರದ ಪರಾರ್ಧಗಳಿಗೆ ಸಂಧ್ಯಾಕಾಲ-ದಲ್ಲಿ ಬಲವಿರುವದು. ( ಸಂಧ್ಯಾದ್ವಯ ಬಲೀರಾಶಿಗಳು )

ರಾಶಿಗಳ ಬಣ್ಣ : ರಕ್ತಃಶ್ವೇತಃ ಶುಕ ತನುನಿಭಃ ಪಾಟಲೋ
ಧೂಮ್ರ ಪಾಂಡುಃ ।
ಚಿತ್ರಃ ಕೃಷ್ಣಃ ಕನಕಸದೃಶಃ ಪಿಂಗಲಃ ಕರ್ಬುರಶ್ಚ ।
ಬಭ್ರುಃ ಸ್ವಚ್ಛಃ ಪ್ರಥಮಭವನಾದ್ಯೇಷು ವರ್ಣಾಃ ।

ರಾಶಿಗಳ ಬಣ್ಣಗಳು— ಮೇಷ ಕೆಂಪು, ವೃಷಭ ಬಿಳಿ, ಮಿಥುನ ಗಿಳಿಹಸಿರು, ಕರ್ಕ ಗುಲಾಬಿಬಣ್ಣ, ಪಾಟಲಿ ನಸುಗೆಂಪು, ಸಿಂಹ ಧೂಮ್ರ ಪಾಂಡು, ಸ್ವಲ್ಪ ಬಭ್ರ. ಕನ್ಯಾ – ಚಿತ್ರ ಅನೇಕ ಬಣ್ಣ. ತುಲಾ ಕೃಷ್ಣ, ವೃಶ್ಚಿಕ ಬಂಗಾರ ವರ್ಣ, ಧನು ಪಿಂಗಾಟವರ್ಣ–ಬೆಕ್ಕಿನ ಕಣ್ಣಿನಂತೆ, ಮಕರ ಸಾರಿವಾಳ ಬಣ್ಣ. ಕುಂಭ ಮುಂಗಲಿ ವರ್ಣ–ಸ್ವಚ್ಛ.

ಆ ರಾಶಿಯಲ್ಲಿ ಅದೇ ನವಾಂಶವಿದ್ದರೆ ಅದಕ್ಕೆ ವರ್ಗೋತ್ತಮ–ವೆನ್ನುವರು. ಮೇಷ, ಕರ್ಕ, ತುಲಾ, ಮಕರಗಳಲ್ಲಿ ೧ ನೆಯ ನವಾಂಶವೇ ವರ್ಗೋತ್ತಮವಾಗುವದು. ವೃಷಭ, ಸಿಂಹ, ವೃಶ್ಚಿಕ, ಕುಂಭಗಳಲ್ಲಿ ೫ ನೆಯ ನವಾಂಶವು ವರ್ಗೋತ್ತಮವಾಗುವದು. ಮಿಥುನ, ಕನ್ಯಾ, ಧನು, ಮೀನಗಳಲ್ಲಿ ೯ ನೆಯ ನವಾಂಶವು ವರ್ಗೋತ್ತಮವಾಗುವದು.

ದ್ರೇಷ್ಕಾಣ: ರಾಶಿಯ ೧/೩ ಭಾಗಕ್ಕೆ ದ್ರೇಷ್ಕಾಣವೆನ್ನುವರು. ೧ ನೆಯ ದ್ರೇಷ್ಕಾಣಕ್ಕೆ ಆ ರಾಶಿಯ ಅಧಿಪತಿಯೇ ಒಡೆಯನಾಗುವನು. ೨ ನೆಯ ದ್ರೇಷ್ಕಾಣಕ್ಕೆ ಆ ರಾಶಿಯಿಂದ ೫ ನೆಯ ರಾಶಿಯ ಅಧಿಪತಿ, ೩ ನೆಯ ದ್ರೇಷ್ಕಾಣಕ್ಕೆ ಆ ರಾಶಿಯಿಂದ ೯ ನೆಯ ರಾಶಿಯ ಅಧಿಪತಿ, ದ್ರೇಷ್ಕಾಣದ ಒಡೆಯರು. ಹೋರಾ = ೧/೨. ನವಾಂಶ ೧/೯. ದ್ವಾದಶಾಂಶ ೧/೧೨. ತ್ರಿಂಶಾಂಶ ೧/೩೦. ವರ್ಗಬಲವನ್ನು ನೋಡುವಾಗ ಲಗ್ನ – ಹೋರಾ – ದ್ರೇಷ್ಕಾಣ, ನವಾಂಶ, ದ್ವಾದಶಾಂಶ, ತ್ರಿಂಶಾಂಶ ಈ ೬ ವರ್ಗಗಳನ್ನು ಮುಖ್ಯವಾಗಿ ನೋಡುವರು.

---

# ಗ್ರಹ ಸ್ವರೂಪ

ಕಾಲಾತ್ಮಾದಿನಕೃತ್, ಮನಸ್ತುಹಿನಗುಃ, ಸತ್ವಂ ಕುಜೋ ಜ್ಞೋ ವಚೋ ।
ಜೀವೋ ಜ್ಞಾನಸುಖಂ ಸಿತಶ್ಚ ಮದನೋ ದುಃಖಂ ದಿನೇಶಾತ್ಮಜಃ।
ರಾಜಾನೌ ರವಿ ಶೀತಗೌ, ಕ್ಷಿತಿಸುತೋ ನೇತಾ ಕುಮಾರೋ ಬುಧಃ ।
ಸೂರಿರ್ದಾನವಪೂಜಿತಶ್ಚ ಸಚಿವಃ ಪ್ರೇಷ್ಯಃ ಸಹಸ್ರಾಂಶುಜಃ ।

ಕಾಲಸ್ವರೂಪಿಯಾದ ಸೂರ್ಯನು ಆತ್ಮಕಾರಕನು. ಚಂದ್ರನು ಮನಃಕಾರಕನು. ಸಾಮರ್ಥ್ಯಕಾರಕ ಮಂಗಳನು. ಬುಧನು ವಾಣೀ-ಕಾರಕನು. ಗುರು ಜ್ಞಾನಕಾರಕ ಮತ್ತು ಸುಖಕಾರಕನು. ಶುಕ್ರನು ಕಾಮಕಾರಕನು. ಶನಿ ದುಃಖಕಾರಕನು.

**ಆತ್ಮಾದಯೋ ಗಗನಗೈಃ ಬಲಿಭಿಃ ಬಲವತ್ತರಾಃ**
**ದುರ್ಬಲೈಃ ದುರ್ಬಲಾಜ್ಞೇಯಾಃ ವಿಪರೀತಃ ಶನಿಃ**
**ಸ್ಮೃತಃ**

ಮಾಣಿಕ್ಯ, ಮೌಕ್ತಿಕ, ಪಚ್ಚ, ಗಾರುತ್ಮತ-ಪುಷ್ಪರಾಗ, ವಜ್ರ, ನೀಲ, ಗೋಮೇಧಕ, ವೈಡೂರ್ಯ ಇವು ರವ್ಯಾದಿ ಗ್ರಹಗಳ ರತ್ನಗಳು.

ಆತ್ಮಾದಿಕಾರಕ ಗ್ರಹಗಳು ಬಲಿಷ್ಠವಾಗಿದ್ದಂತೆ ಅವು, ಜಾತನಿಗೆ ಬಲವನ್ನು ಕೊಡುವವು. ದುರ್ಬಲರಾಗಿದ್ದರೆ, ಬಲವಿಲ್ಲ. ಮಂಗಳನು ಸತ್ವಕಾರಕ. ಅವನು ಬಲಶಾಲಿಯಾಗಿದ್ದರೆ, ಜಾತನಲ್ಲಿ ಜಿಗಟು ಇರುವದು. ದುರ್ಬಲನಾಗಿದ್ದರೆ, ಅವನು ಸತ್ವಹೀನ. ಶನಿಯ ಫಲ ಮಾತ್ರ ವಿಪರೀತ. ಅವನು ಬಲಿಷ್ಠನಾಗಿದ್ದರೆ ದುಃಖ. ದುರ್ಬಲನಾಗಿದ್ದರೆ ಸುಖ.

ರವಿ–ಚಂದ್ರರು ರಾಜರು. ಮಂಗಳನು ಸೇನಾಪತಿ. ಬುಧನು ಯುವರಾಜ. ಗುರು–ಶುಕ್ರರು ಮಂತ್ರಿಗಳು. ಶನಿ ಭೃತ್ಯ. ಮಂತ್ರಿಗಳಾಗಬೇಕಾದರೆ, ಗುರು–ಶುಕ್ರರು ಷಡ್ ಬಲಶಾಲಿಗಳಾಗಿರಬೇಕು. ಶನಿಗೆ ಬಲವಿದ್ದರೆ ಪೋಲೀಸಖಾತೆ.

ಗುಣಗಳು :— ರವಿ, ಚಂದ್ರ, ಗುರುಗಳು ಸಾತ್ವಿಕರು. ಬುಧ, ಶುಕ್ರರು ರಾಜಸರು. ಶನಿ, ರಾಹು, ಮಂಗಳರು ತಾಮಸರು.

## ಗ್ರಹಗಳ ವರ್ಣ

**ರಕ್ತಶ್ಯಾಮೋ ಭಾಸ್ಕರೋ ಗೌರ ಇಂದುಃ ।**
**ನಾತ್ಯುಚ್ಚಾಂಗೋ ರಕ್ತಗೌರಶ್ಚ ವಕ್ರಃ ।**
**ದೂರ್ವಾಶ್ಯಾಮೋ ಜ್ಞೋ ಗುರುರ್ಗೌರಗಾತ್ರಃ ।**
**ಶ್ಯಾಮಃ ಶುಕ್ರೋ ಭಾಸ್ಕರಿಃ ಕೃಷ್ಣದೇಹಃ ।**

ಸೂರ್ಯ ರಕ್ತಶ್ಯಾಮ, ಚಂದ್ರ ಗೌರ, ಮಂಗಳ ರಕ್ತಗೌರ, ಬುಧ ಕರಿಕೆಬಣ್ಣ, ಗುರು ಗೌರ. ಶುಕ್ರ ಕಪ್ಪು ಮಿಶ್ರಿತ ಗೌರ. ಶನಿ ಕಪ್ಪು. ಇದು ವರಾಹ–ಮಿಹಿರಾಚಾರ್ಯರ ಮತ. ರವಿ ಲಗ್ನದಲ್ಲಿದ್ದರೆ, ಕುಸುಬೆಹೂವಿನ ಬಣ್ಣವಿರುವದು. ಜಗನ್ನಾಥನು ಯವನಿಯನ್ನು ಬಣ್ಣಿಸಿದಂತೆ, ಕುಸುಂಭಾರುಣಂ ಚಾರು ಚೇಲಂ ವಸಾನಾ— ಈ ಬಣ್ಣ. ಚಂದ್ರ–ಶುಕ್ರರು, ಪ್ರಾಯಶಃ ಗೌರವರ್ಣವನ್ನು ಕೊಡುವರು. ಕಾಶ್ಮೀರ ಗೌರ. ಶನಿ ಕಪ್ಪು. ಗುರು ಹಳದಿ. ಬುಧನದು ಹಸಿರು ಬಣ್ಣದರ್ಶಕವಾಗಿದ್ದರೂ, ಮಾನವರು ಹಸಿರು ಇರುವದಿಲ್ಲ. ಅವನ ಬಣ್ಣ ಹಳದಿಗೆ ಸಮೀಪವಿರುವದು. ಗುರು ಹಳದಿ ಸಮೀಪದಲ್ಲಿ ಇರುವನು ಗ್ರಹಗಳ ದೃಷ್ಟಿವೇಗದಿಂದ ಮಿಶ್ರವರ್ಣದವರೇ ಹಲವರು. ಮಂಗಳನು, ಸೂರ್ಯ, ಶನಿಗಳು ಶುಷ್ಕಗ್ರಹಗಳು. ಬುಧ–ಗುರುಗಳು ಜಲರಾಶಿಯಲ್ಲಿ ಜಲಗ್ರಹಗಳು. ಚಂದ್ರ–ಶುಕ್ರರು ಜಲಗ್ರಹಗಳು.

ಪಾಪಗ್ರಹಗಳು---

ಕ್ಷೀಣೇಂದ್ವರ್ಕ ಮಹೀಸುತಾರ್ಕ ತನಯಾ ಪಾಪಾ
ಬುಧಸ್ತೈರ್ಯುತಃ ।

ಕ್ಷೀಣ ಚಂದ್ರ, ರವಿ, ಮಂಗಳ, ಶನಿಗಳು ಪಾಪಗ್ರಹಗಳು. ಬುಧ ಇವರಿಂದ ಕೂಡಿದ್ದರೆ ಪಾಪಗ್ರಹ.

ಗುರು, ಶುಕ್ರರು ಶುಭಗ್ರಹಗಳು. ಬುಧನು ಇವರೊಡನಿದ್ದರೆ ಶುಭ ಗ್ರಹ. ಚಂದ್ರನಿಗೆ ಶುಕ್ಲ ಪ್ರತಿಪದೆಯಿಂದ ದಶಮಿಯ ವರೆಗೆ ಮಧ್ಯಮ ಬಲವಿರುವದು. ಅಲ್ಲಿಂದ ಕೃಷ್ಣ ಪಂಚಮಿಯ ವರೆಗೆ ಪೂರ್ಣ ಬಲ. ಕೃ. ೫ ರಿಂದ ಅಮಾವಾಸ್ಯೆವರೆಗೆ ಕ್ಷೀಣಬಲವಿರುವದು. ಬುಧನು ಸಹವಾಸದಂತೆ.

ಶುಕ್ರ ಶಶಾಂಕ ( ಬಲಿ ) ಜೀವಾಃ ಶುಭಾಃ.
ಬುಧ ಸೂರ್ಯ ಸುತೌ ನಪುಂಸಕಾಖ್ಯೌ ।
ಶಶಿಶುಕ್ರೌ ಯುವತೀ ನರಾಶ್ಚ ಶೇಷಾಃ ॥

ಬುಧ, ಶನಿಗಳು ಪಂಢರು; ಚಂದ್ರ, ಶುಕ್ರರು ಸ್ತ್ರೀಯರು, ರವಿ, ಮಂಗಳ, ಗುರುಗಳು ಪುರುಷರು.

ಮಂಗಳನಿಗೆ ಅಗ್ನಿತತ್ವ, ಬುಧನಿಗೆ ಪೃಥ್ವೀತತ್ವ, ಗುರು-ಆಕಾಶತತ್ವ ಶುಕ್ರ-ಜಲತತ್ವ, ಶನಿ ವಾಯುತತ್ವ, ಗುರು, ಶುಕ್ರರು ಬ್ರಾಹ್ಮಣರು. ಮಂಗಲ, ರವಿಗಳು ಕ್ಷತ್ರಿಯರು. ಚಂದ್ರ, ಬುಧರು ವೈಶ್ಯರು. ಶನಿ ಶೂದ್ರ ಸಂಕರಜಾತಿ.

ಸೂರ್ಯ–

ಮಧುಪಿಂಗಲದೃಕ್, ಚತುರಸ್ರತನುಃ
ಪಿತ್ತ ಪ್ರಕೃತಿಃ ಸವಿತಾಽಲ್ಪಕಚಃ

ಪಿಂಗಲ ಬಣ್ಣದ ಕಣ್ಣು, ಚೌರಸ ದೇಹ, ಪಿತ್ತ ಪ್ರಕೃತಿ, ಕೂದಲು ಸ್ವಲ್ಪ, ಇದು ಸೂರ್ಯನ ಸ್ವರೂಪ. ಶೂರನು, ಗಂಭೀರನು, ಕೌಸುಂಭವಸ್ತ್ರಧಾರಿ.

ಚಂದ್ರ:— **ತನುವೃತ್ತ ತನುಃ ಬಹುವಾತಕಫಃ**
**ಪ್ರಾಜ್ಞಶ್ಚ ಶಶೀ ಮೃದುವಾಕ್ ಶುಭದೃಕ್**

ದುಂಡಗಿನ ಕೋಮಲ ಶರೀರ. ವಾತಕಫ ಪ್ರಕೃತಿ, ಜಾಣನು. ಮೃದು ಮಾತು, ಶುಭದೃಷ್ಟಿ. ಇದು ಚಂದ್ರನ ಸ್ವರೂಪ ' **ಪ್ರಾಜ್ಞಃ ಸುವಕ್ತಾ ಗೌರಃ ಶುಭ್ರಾಂಬರಃ** '

ಮಂಗಳ:— **ಕ್ರೂರದೃಕ್ ತರುಣಮೂರ್ತಿರುದಾರಃ**
**ಪೈತ್ತಿಕಃ ಸುಚಪಲಃ ಕೃಶಮಧ್ಯಃ**

ಕ್ರೂರನೋಟ, ತಾರುಣ್ಯದ ಹೊಳಪು, ಉದಾರ, ಪಿತ್ತ ಪ್ರಕೃತಿ, **ಚಪಲ,** ಸಣ್ಣ ಟೊಂಕ ಇವು ಮಂಗಳನ ಲಕ್ಷಣಗಳು.

ಬುಧ:— **ಶ್ಲಿಷ್ಟವಾಕ್ ಸತತ ಹಾಸ್ಯರುಚಿಃ ಪಿತ್ತ ಮಾರುತ**
**ಕಫ ಪ್ರಕೃತಿಶ್ಚ.**

ಶ್ಲೇಷಯುಕ್ತ ಅಲಂಕಾರಿಕ ಭಾಷೆ. ವಿನೋದಪ್ರಿಯ, ಕಫವಾತ-**ಪಿತ್ತ** ಮಿಶ್ರ ಪ್ರಕೃತಿ.

ಗುರು:— **ಬೃಹತ್ತನುಃ ಪಿಂಗಲಮೂರ್ಧಜೇಕ್ಷಣೋ**
**ಬೃಹತ್ತನು ಶ್ರೇಷ್ಠಮತಿಃ ಕಫಾತ್ಮಕಃ ।**

ದೊಡ್ಡ ಶರೀರ, ಪಿಂಗಲವರ್ಣದ ಕೂದಲು, ಕಣ್ಣು, ಬುದ್ಧಿವಾನ್, **ಕಫಪ್ರಕೃತಿ.**

ಶುಕ್ರ:— **ಭೃಗುಃ ಸುಖೀ ಕಾಂತವಪುಃ ಸುಲೋಚನಃ**
**ಕಫಾ ನಿಲಾತ್ಮಾಸಿತ ವಕ್ರಮೂರ್ಧಜಃ ।**

ಸುಖಿ, ಸುಂದರ ಶರೀರ, ಕಫವಾತ ಪ್ರಕೃತಿ, ಕಪ್ಪು ಕುಟಿಲ ಕೂದಲು **(ಗುಂಗುರಗೂದಲು.)** ' ಸುನೇತ್ರ, ಮಧ್ಯವಯಾಃ '

**ಶನಿ:—ಮಂದೋಽಲಸಃ ಕಪಿಲದೃಕ್ ಕೃಶದೀರ್ಘ ಗಾತ್ರಃ।**
**ಸ್ಥೂಲದ್ವಿಜಃ ಪುರುಷರೋಮಕ ಚೋಽನಿಲಾತ್ಮಾ**

ಆಲಸಿ, ಕಪಿಲದೃಷ್ಟಿ, ದೊಡ್ಡ ಹಲ್ಲುಗಳು, ಕಠಿಣ ಕೂದಲು, ಬಿರುಸು ತೊಗಲು, ವಾತ ಪ್ರಕೃತಿ ' ಸಿಂಗನಯನಃ ಕ್ರೋಧೀ ಕೃಷ್ಣಾಂಬರಃ '

ಲಗ್ನದಲ್ಲಿ ಉದಿತವಾದ ನವಾಂಶದ ಸ್ವಾಮಿಯಂತೆ ಜಾತನ ಸ್ವರೂಪ ವಿರುವದು. 'ಲಗ್ನ ನವಾಂಶಪ ತುಲ್ಯ ತನುಃ '

ಶನಿ ಶಿಶಿರ ಋತುವಿಗೆ, ಶುಕ್ರನು ವಸಂತಕ್ಕೆ, ಮಂಗಳನು ಗ್ರೀಷ್ಮಕ್ಕೆ-ಚಂದ್ರನು ವರ್ಷಾ ಋತುವಿಗೆ, ಬುಧನು ಶರದೃತುವಿಗೆ, ಬೃಹಸ್ಪತಿ ಹೇಮಂತ ಋತುವಿಗೆ ಅಧಿಪತಿಗಳು.

ತ್ರಿದಶ (೩-೧೦) ತ್ರಿಕೋಣ (೫-೯) ಚತುರಸ್ರ (೪-೮) 'ಸಪ್ತಮಾನ್ ಅವಲೋಕಯಂತಿ ಚರಣಾಭಿವೃದ್ಧಿತಃ'

**ಪಶ್ಯಂತಿ ಸಪ್ತಮಂ ಸರ್ವೇ**

೩-೧೦ ರಲ್ಲಿ ಶನಿಯ ದೃಷ್ಟಿ, ೫-೯ ರಲ್ಲಿ ಗುರುವಿನ ದೃಷ್ಟಿ, ೪-೮ ರಲ್ಲಿ ಮಂಗಳನ ದೃಷ್ಟಿ ಪೂರ್ಣವಿರುವದು.

ಎಲ್ಲ ಗ್ರಹಗಳು ೭ ನೆಯ ಮನೆಯನ್ನು ನೋಡುವವು. ೩-೧೦ ರಲ್ಲಿ ಶನಿಯನ್ನು ಬಿಟ್ಟು ಉಳಿದ ಗ್ರಹಗಳ ¼ ದೃಷ್ಟಿ ೫-೯ ರಲ್ಲಿ ಗುರುವನ್ನು-ಳಿದು ಇತರರು ½ ನೋಟ—ತಾತ್ಕಾಲಿಕ ಮಿತ್ರರು. ' ಅನ್ಯೋನ್ಯಸ್ಯ ಧನವ್ಯಯಾಯ ಸಹಜ ವ್ಯಾಪಾರ ಬಂಧು ಸ್ಥಿತಾಃ ತತ್ಕಾಲೇ ಸುಹೃದಃ '

ಪರಸ್ಪರರಿಂದ ಪರಸ್ಪರರು. ೨-೧೨-೧೧-೩-೧೦-೪ ರಲ್ಲಿ ಇದ್ದ-ವರು ತಾತ್ಕಾಲಿಕ ಮಿತ್ರರು. ದಶಾಯ ಬಂಧುಸಹಜ ಸ್ವಾಂತ್ಯಸ್ಥಾಸ್ತೇ ಪರಸ್ಪರಂ '

**' ಸ್ವೋಚ್ಚ ಸುಹೃತ್ ಸ್ವತ್ರಿಕೋಣ ನವಾಂಶೈಃ**
**ಸ್ಥಾನಬಲಂ ಸ್ವಗೃಹೋಪಗತೈಶ್ಚ '**

ಗ್ರಹಗಳು ತಮ್ಮ ಉಚ್ಚದಲ್ಲಿ, ಮಿತ್ರಕ್ಷೇತ್ರದಲ್ಲಿ, ಮೂಲತ್ರಿಕೋಣ-ದಲ್ಲಿ, ನವಾಂಶದಲ್ಲಿ, ತಮ್ಮ ರಾಶಿಯಲ್ಲಿ ಇದ್ದಾಗ ಅವುಗಳಿಗೆ ಸ್ಥಾನಬಲ-ವಿರುವದು.

ಸಾರಾವಲಿಯಲ್ಲಿ — **ವಿಂಶತಿರಂಶಾಃ ಸಿಂಹೇ ತ್ರಿಕೋಣ-ಮಪರೇ ಸ್ವಭವನಮರ್ಕಸ್ಯ ಉಚ್ಚಂ ಭಾಗತೃತೀಯಂ ವೃಷ ಇಂದೋಃ ಸ್ಯಾತ್ ತ್ರಿಕೋಣಮಪರೇಂಶಾಃ । ದ್ವಾದಶ ಭಾಗಾ ಮೇಷೇ ತ್ರಿಕೋಣಮಪರೇ ಸ್ವಭಂತು ಭೌಮಸ್ಯ । ಉಚ್ಚ ಫಲಂ ಕನ್ಯಾಯಾಂ ಬುಧಸ್ಯ ತಿಥ್ಯಂಶಕೈಃ ಸದಾಚಿಂತ್ಯಂ । ಪರತಸ್ತ್ರಿಕೋಣ ಜಾತಂ ಪಂಚಭಿರಂಶೈಃ ಸ್ವರಾಶಿಜಂ ಪರತಃ । ದಶಭಾಗಾಂಶೈರ್ಜೀವಸ್ಯ ತ್ರಿಕೋಣಫಲಂ ಸ್ವಭಿಂ ಪರಂಚಾಪೇ । ಶುಕ್ರಸ್ಯ ತು ತ್ರಯೋಂಶಾಃ ತ್ರಿಕೋಣಮಪರೇ ಘಟೀ ಸ್ವರಾಶಿಶ್ಚ । ಕುಂಭೇ ತ್ರಿಕೋಣ ನಿಜಭೇ-ರವಿಜಸ್ಯ ವೀರ್ಯಥಾ ಸಿಂಹೇ.**

ದಿಗ್ಬಲ—ಬುಧ, ಗುರುಗಳಿಗೆ ಲಗ್ನದಲ್ಲಿ, ರವಿ, ಮಂಗಳರಿಗೆ ದಶಮ-ದಲ್ಲಿ, ಶನಿಗೆ ಸಪ್ತಮದಲ್ಲಿ, ಚಂದ್ರ, ಶುಕ್ರರಿಗೆ ಚತುರ್ಥದಲ್ಲಿ ದಿಗ್ಬಲ-ವಿರುವದು.

ಚೇಷ್ಟಾಬಲ— **ಉದಗಯನೇ ರವಿಶೀತ ಮಯೂಖೌ । ವಕ್ರಸಮಾಗಮಗಾಃ ಪರಿಶೇಷಾಃ । ವಿಪುಲಕರಾಃ ಯುಧಿ ಚೋತ್ತರಸಂಸ್ಥಾಃ ಚೇಷ್ಟಿತ ವೀರ್ಯಯುತಾಃ ಪರಿಕಲ್ಪ್ಯಾಃ ।**

ಸೂರ್ಯ-ಚಂದ್ರರು ಉತ್ತರಾಯಣದ ( ಮಕರಾದಿ ಆರು ರಾಶಿ-ಗಳಲ್ಲಿ ), ಚೇಷ್ಟಾ ಬಲವುಳ್ಳವರಾಗುವರು. ಮಂಗಲ, ಬುಧ, ಗುರು, ಶುಕ್ರ, ಶನಿಗಳು ವಕ್ರಿಯಾಗಿರುವಾಗ ಅಥವಾ ಚಂದ್ರಯುಕ್ತರಾಗಿರುವಾಗ

ಅಥವಾ ಉತ್ತರದಲ್ಲಿ ( ಗ್ರಹಯುದ್ಧವುಂಟಾದಾಗ ) ಇರುವ ಗ್ರಹವು ಚೇಷ್ಟಾಬಲವುಳ್ಳದ್ದಾಗುವದು.

ಸೂರ್ಯನಿಂದ ಕೂಡಿದ ಗ್ರಹವು ಅಸ್ತವಾಗಿರುವದು. ಚಂದ್ರನಿಂದ ಕೂಡಿದ ಗ್ರಹಕ್ಕೆ ಸಮಾಗಮವೆನ್ನುವರು. ಚಂದ್ರನಿಂದ ಕೂಡಿವಾಗ ಮಂಗಳಾದಿಗಳ ಯುದ್ಧವಾಗುವದೆಂದು ಹೇಳುವರು. ಆಗ ಉತ್ತರಶರವಿದ್ದ ಗ್ರಹವು ವಿಜಯಿ ಆಗಿರುವದು. ಅದಕ್ಕೆ ವಿಪುಲಕಿರಣಗಳಿರುವವು. ರಾಫೆಲ್ ಪಂಚಾಂಗದಿಂದ ಉತ್ತರಶರ ದಕ್ಷಿಣಶರಗಳನ್ನು ತಿಳಿದುಕೊಳ್ಳಬೇಕು.

**ದೃಗ್ ಬಲ—** ಗ್ರಹಗಳ ದೃಷ್ಟಿಬಲವನ್ನು ಗಣಿತದಿಂದ ತೆಗೆಯುವರು.

**ನೈಸರ್ಗಿಕಬಲ—** ಸಿತಿ ರವಿ, ಕುಜ, ಸೌರಾ ( ರಾತ್ರಿಯಲ್ಲಿ ಚಂದ್ರ, ಮಂಗಳ, ಶನಿಗಳು ಬಲಿಷ್ಠರಿರುವರು. ) **ಸರ್ವದಾ ಜ್ಞೋಽಹ್ನಿ ಚಾನ್ಯೇ ।** ಬುಧನಿಗೆ ಯಾವಾಗಲೂ ( ರಾತ್ರಿ-ಹಗಲು ) ಕಾಲಬಲವಿರುವದು. ಸೂರ್ಯ, ಬೃಹಸ್ಪತಿ, ಶುಕ್ರರಿಗೆ ಹಗಲು ಬಲವಿರುವದು. ಶುಕ್ಲ ಪಕ್ಷದಲ್ಲಿ ಶುಭ ಗ್ರಹಗಳು, ಕೃಷ್ಣಪಕ್ಷದಲ್ಲಿ ಪಾಪಗ್ರಹಗಳು ಬಲಶಾಲಿಯಾಗಿರುವವು.

ಷಡ್ಬಲಗಳು— **ಸ್ಥಾನಬಲ, ದಿಗ್ಬಲ, ಕಾಲಬಲ, ಚೇಷ್ಟಾಬಲ, ನೈಸರ್ಗಿಕಬಲ, ದೃಗ್ ಬಲ.**

ಈ ಆರು ಬಲಗಳನ್ನು ಶ್ರೀಪತಿ ಕೇಶವ ಪರಾಶರರು ಗಣಿತ ಮಾಡಿ ತೋರಿಸಿರುವರು. ಸಾಮಾನ್ಯವಾಗಿ ವರಾಹಮಿಹಿರಾಚಾರ್ಯರು ಹೇಳಿದಷ್ಟು ತಿಳಿವಳಿಕೆ ಕುಂಡಲಿ – ನಿರೀಕ್ಷಣೆಗೆ ಸಾಕು. ಗಣಿತಕ್ಕಾಗಿ ಪರಿಶ್ರಮಪಡುವವರು ಬೆಂಗಳೂರಿನ ಪ್ರಖ್ಯಾತ ಜ್ಯೋತಿರ್ವಿದರಾದ ಬಿ. ವ್ಹಿ. ರಾಮನ್‌ರ ಗ್ರಹಬಲ, ಭಾವಬಲ ಈ ಇಂಗ್ಲಿಷ ಪುಸ್ತಕವನ್ನು ಅವಶ್ಯವಾಗಿ ನೋಡಬೇಕು. ಸಂಸ್ಕೃತ ಬಾರದವರಿಗೂ ಕೂಡ ತಿಳಿಯುವಷ್ಟು ಸುಲಭ ರೀತಿಯಿಂದ ಆಂಗ್ಲಭಾಷೆಯಲ್ಲಿ ವಿವರಿಸಿದ್ದಾರೆ. ಉಭಯ ಭಾಷೆಗಳನ್ನು

ಅರಿಯದವರು ಕನ್ನಡದಲ್ಲಿ ಇಂತಹ ಗ್ರಂಥಗಳಾಗಬೇಕೆಂದು ಬಯಸಿದರೆ ಪುನಃ ವಿಜಯನಗರ ರಾಜ್ಯವೇ ಬರಬೇಕು. ಇರಲಿ.

ಬಲಗಳ ಫಲವು ಸಾರಾವಲಿಯಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿರುವದು. ಉಚ್ಚಬಲದಿಂದ ಕೂಡಿದ ಗ್ರಹವು ಐಶ್ವರ್ಯವನ್ನು ಕೊಡುವದು. ತ್ರಿಕೋಣ ಬಲದಿಂದ ಕೂಡಿದ್ದು ಮಂತ್ರಿತ್ವವನ್ನು, ಸೇನಾಪತಿತ್ವವನ್ನು ಕೊಡುವದು. ಸ್ವಕ್ಷೇತ್ರ ಗ್ರಹವು ಧನಧಾನ್ಯಾದಿ ಸಂಪತ್ತನ್ನು ಕೊಡುವದು. ಮಿತ್ರಕ್ಷೇತ್ರದಲ್ಲಿದ್ದ ಗ್ರಹವು ಕೀರ್ತಿಯನ್ನು ಕೊಡುವದು. ಇದು ತೇಜಸ್ವಿತೆ, ಸುಖ, ರಾಜ, ಧನ ಇವುಗನ್ನು ಕೊಡುವುದು. ತನ್ನ ನವಾಂಶದಲ್ಲಿದ್ದ ಗ್ರಹವು ಖ್ಯಾತಿಯನ್ನು ಕೊಡುವದು. ದಿಗ್ಬಲವಿದ್ದ ಗ್ರಹವು ಆ ದಿಕ್ಕಿಗೆ ಜಾತನನ್ನು ಒಯ್ದು ವಸ್ತ್ರವಿಭೂಷಣ, ವಾಹನಸೌಖ್ಯಗಳನ್ನು ಕೊಡುವದು.

ಶುಭ ಗ್ರಹಗಳು ವಕ್ರಿಯಾಗಿದ್ದರೆ ರಾಜ್ಯವನ್ನು ಕೊಡುವವು. ಪಾಪಗ್ರಹಗಳು ವಕ್ರಿಯಾಗಿದ್ದರೆ ವ್ಯಸನಿಗಳನ್ನೂ ವೃಥಾಸಂಚಾರಿಗಳನ್ನೂ ಮಾಡುವವು. ಯುದ್ಧದಲ್ಲಿ ವಿಜಯಿಯಾದ ಗ್ರಹವು ಸ್ವಾಸ್ಥ್ಯವನ್ನುಂಟು ಮಾಡುವದು. ರಾಜ್ಯದಲ್ಲಿ ಶತ್ರುಗಳು ಇಲ್ಲದಂತೆ ಮಾಡುವದು. ಕಾಲಬಲದಿಂದ ಕೂಡಿದ ಗ್ರಹವು ಗಜಲಾಭ, ಶೌರ್ಯವೃದ್ಧಿಯನ್ನುಂಟು ಮಾಡಿ, ಶತ್ರುಗಳನ್ನು ಮಲಿನಮಾಡಿ ಪ್ರಕಟಭೋಗವನ್ನು ಅನುಭವಿಸುವಂತೆ ಮಾಡುವದು.

ಶುಭ ಗ್ರಹಗಳ ಬಲದಿಂದ ಸಜ್ಜನರೂ, ಪಾಪಗ್ರಹಗಳ ಬಲದಿಂದ ದುರ್ಜನರೂ ಹುಟ್ಟುವರೆಂದು ಸಾರಾವಲಿಕಾರನು ಹೇಳುವನು. ಜ್ಯೋತಿಃ ಶಾಸ್ತ್ರವು ಬಹಳ ತಾರತಮ್ಯದಿಂದ ಕೂಡಿರುವದು. ತಾರತಮ್ಯವನ್ನರಿಯದವರು ಶಾಸ್ತ್ರವನ್ನು ಓದಲೇಬಾರದು.

ಗ್ರಹಗಳ ಕಾಲಸೂಚನೆ— 'ಅಯನಕ್ಷಣ ವಾಸರರ್ತವೋ ಮಾಸೋಽರ್ಥಂ ಚ ಸಮಾಶ್ಚ ಭಾಸ್ಕರಾತ್' **ಅಯನ,** ( ೬ ತಿಂಗಳು ) **ಮುಹೂರ್ತ** ( ೨ ಗಳಿಗೆ ) ದಿವಸ, **ಋತು** ( ೨ ತಿಂಗಳು ) ಮಾಸ, ಪಕ್ಷ ( ೧೫ ದಿನಗಳು.) ವರ್ಷ ಈ ಕಾಲವನ್ನು ಸೂರ್ಯಾದಿ ಗ್ರಹಗಳು ಸೂಚಿಸುವವು.

ಲಗ್ನದಲ್ಲಿ ಉದಿತವಾದ ನವಾಂಶದ ಅಧಿಪತಿ ಲಗ್ನದಲ್ಲಿ ಉದಿತವಾದ ನವಾಂಶ ಸಂಖ್ಯೆಯಷ್ಟು ಕಾಲವನ್ನು ಸೂಚಿಸುವನು. ಕಾಲ ಪ್ರಯೋಜನ ಪ್ರಶ್ನ ಕುಂಡಲಿಯಲ್ಲಿ ವಿಶೇಷವಾಗಿರುವದು.

ಸೂರ್ಯಾದಿ ಗ್ರಹಗಳು ಕ್ರಮವಾಗಿ ಕಟು, ಲವಣ, ತಿಕ್ತ, ಮಿಶ್ರ, ಮಧುರ, ಆಮ್ಲ, ಕಷಾಯ ಈ ಷಡ್ರಸಗಳನ್ನು ಸೂಚಿಸುವವು. ಕುಂಡಲಿಯಲ್ಲಿ ೨ ನೆಯ ಭಾವದಲ್ಲಿದ್ದ ಗ್ರಹವು ಅಥವಾ ಭಾವಾಧಿಪತಿ ಯಾವನಿರುವನೋ ಅವನ ರಸ ಕಟು.... ಮಧುರಾಮ್ಲಾದಿಗಳು ಅವನ ಪ್ರೀತಿಯ ರಸವಿರುವದು.

ಸೂರ್ಯನಿಗೆ ದೇವಸ್ಥಾನ, ಚಂದ್ರನಿಗೆ ಜಲಸ್ಥಾನ, ಮಂಗಳನಿಗೆ ಅಗ್ನಿಸ್ಥಾನ, ಬುಧನಿಗೆ ಆಟದ ಸ್ಥಾನ, ಗುರುವಿಗೆ ಕೋಶಾಗಾರ, ಶುಕ್ರನಿಗೆ ಶಯನಾಗಾರ, ಶನಿಗೆ ಊಷರ ( ಮರುಭೂಮಿ ). ಸಹರಾ ಅರಣ್ಯವು ಇಂದಿನ ಯುಗದಲ್ಲಿ ಫಲವತ್ತಾಗುತ್ತಿರುವಾಗ ಶನಿಗೆ ಪ್ರಿಯಭೂಮಿ ಇಲ್ಲದಂತಾಗಬಹುದೇನೋ ! ! ! ಆದರ ಚಿಂತೆ ಆ ಶನಿಗಿಲ್ಲ. ಅವನು ಬಯಸಿದರೆ ರಮ್ಯ ಉದ್ಯಾನಗಳನ್ನು ಕೂಡ ಮರಭೂಮಿಯನ್ನು ಮಾಡಿಕೊಳ್ಳುವ ಸಾಮರ್ಥ್ಯ ಅವನಿಗಿರುವದು.



# ನಕ್ಷತ್ರ ಫಲ

ವರಾಹಮಿಹಿರಾಚಾರ್ಯರ ಮತದಂತೆ—

**ಪ್ರಿಯಭೂಷಣಃ ಸುರೂಪಃ ಸುಭಗೋ**
**ದಕ್ಷೋಽಶ್ವಿನೀಷು ಮತಿಮಾಂಶ್ಚ ।**

ಅಶ್ವಿನಿಯಲ್ಲಿ ಹುಟ್ಟಿದವರು ಅಲಂಕಾರಪ್ರಿಯರು, ಸ್ವರೂಪಿಗಳು ಒಳ್ಳೇ ದೈವಶಾಲಿಗಳು, ದಕ್ಷರು, ಬುದ್ಧಿವಂತರು ಇರುವರು.

**ಕೃತನಿಶ್ಚಯಃ ಸತ್ಯಪರೋ ದಕ್ಷಃ ಸುಖಿತಶ್ಚ ಭರಣೀಷು.**

ದೃಢನಿರ್ಧಾರವುಳ್ಳವರು, ಸತ್ಯಾಸಕ್ತರು, ದಕ್ಷರು ( ಕಾರ್ಯಕಾರಿ ), ಸುಖಿಗಳು – ಭರಣಿಯಲ್ಲಿ ಹುಟ್ಟುವರು. ( ಅಶ್ವಿನೀ–ಭರಣಿಗಳಲ್ಲಿ ೩–೩ ನಕ್ಷತ್ರಗಳಿರುವವು. ಆದ್ದರಿಂದ ಬಹುವಚನ ಪ್ರಯೋಗ.)

ಕೃತ್ತಿಕಾ—**ಬಹುಭುಕ್ ಪರದಾರರತಃ ತೇಜಸ್ವೀ ಕೃತ್ತಿಕಾಸು ವಿಖ್ಯಾತಃ ।**

ಹೆಚ್ಚು ಊಟ ಮಾಡಿ ಪಚನ ಮಾಡಿಕೊಳ್ಳುವ ಶಕ್ತಿಯುಳ್ಳವರು. ಪರದಾರರತರು, ತೇಜಸ್ವಿಗಳು, ವಿಖ್ಯಾತರು ಇರುವರು.... ಪರದಾರಗಮನ ಮುಂತಾದ ಯೋಗಗಳನ್ನು ಬರೇ ನಕ್ಷತ್ರದಿಂದ ಹೇಳಲಾಗದು. ಅಶುಭ ಯೋಗಗಳ ಸಮುಚ್ಚಯವು ಒಂದು ವಿಶಿಷ್ಟ ದುರ್ಗುಣವನ್ನು ಹುಟ್ಟಿಸುವದು. ಶುಕ್ರ–ಮಂಗಳರ ಕೇಂದ್ರ ಪ್ರತಿಯೋಗಗಳು, ೨, ೭ ಭಾವಗಳು ಪೀಡಿತವಾಗಿರುವದು ಇಂಥ ಜನರನ್ನು ಹುಟ್ಟಿಸಬಹುದು— ಜಾರಯೋಗದ ಬಗ್ಗೆ ಕಾರ್ಟರ್ ಪುಸ್ತಕ ನೋಡಿರಿ.

**ರೋಹಿಣೀ—** ಚಂದ್ರನು ರೋಹಿಣೀಪ್ರಿಯ. ಈ ನಕ್ಷತ್ರವು ಬಹಳ ಒಳ್ಳೆಯದು. 'ರೋಹಿಣ್ಯಾಂ ಸತ್ಯಶುಚಿಃ ಪ್ರಿಯಂವದಃ ಸ್ಥಿರಮತಿಃ ಸುರೂಪಶ್ಚ' ಸತ್ಯಪ್ರಿಯ, ಪವಿತ್ರ, ಪ್ರೀತಿಯ ಮಾತುಗಳನ್ನು ಆಡುವವನು, ಸ್ಥಿರಬುದ್ಧಿಯವನು, ಸುರೂಪಿಯು.

**ಚಪಲಶ್ಚತುರೋ ಭೀರುಃ ಪಟುರುತ್ಸಾಹೀ ಧನೀ ಮೃಗೇ ಭೋಗೀ.**

ಮೃಗಶಿರಾ ನಕ್ಷತ್ರದಲ್ಲಿ ಹುಟ್ಟಿದವರು ಚಪಲರು, ಚತುರರು, ಅಂಜುಗುಳಿಗಳು, ಜಾಣರು, ಉತ್ಸಾಹಿಗಳು, ಧನಿಕರು, ಭೋಗಿಗಳು ಆಗುವರು.

**ಶಠಗರ್ವಿತಃ ಕೃತಘ್ನೋ ಹಿಂಸ್ರ ಪಾಪಶ್ಚ ರೌದ್ರ ಕ್ಷೇ.**

ಶಠರು, ಗರ್ವಿತರು, ಕೃತಘ್ನರು, ಕ್ರೌರ್ಯವಂತರು, ಪಾಪಿಗಳು ಆರಿದ್ರಾದಲ್ಲಿ ಹುಟ್ಟುವರು. (ಕುಂಡಲಿಯಲ್ಲಿ ಗುರು-ಶುಕ್ರರು ಬಲಿಷ್ಠರಿದ್ದರೆ ಈ ಅವಗುಣಗಳು ಮರೆಯಾಗುವವು.

**ದಾಂತಃ ಸುಖೀ ಸುಶೀಲೋ ದುರ್ಮೇಧಾ ರೋಗಭಾಕ್ ಪಿಪಾಸುಶ್ಚ ।**
**ಅಲ್ಪೇನ ಚ ಸಂತುಷ್ಟಃ ಪುನರ್ವಸೌ ಜಾಯತೇ ಮನುಜಃ,**

ಇಂದ್ರಿಯನಿಗ್ರಹಿ, ಸುಖಿ, ಒಳ್ಳೆಯ ಶೀಲವುಳ್ಳವನು ಆಗುವನು. ಪುನರ್ವಸು ನಕ್ಷತ್ರದ ಅಧಿಪತಿ ಗುರು. ಗುರು ದುರ್ಬಲನಿದ್ದರೆ ದುರ್ಬುದ್ಧಿಯವನೂ ರೋಗಿಯೂ ನೀರಡಿಸಿದವನೂ ಆಗಬಹುದು. ಗುರು ಬಲಿಯಾಗಿದ್ದರೆ ಸದ್ಗುಣಗಳು ತೋರುವವು.

**ಪುಷ್ಯ— ಶಾಂತಾತ್ಮಾ ಸುಭಗಃ ಪಂಡಿತೋ ಧನೀ ಧರ್ಮ**

**ಸಂಯುತಃ ಪುಷ್ಯೇ** | ಪುಷ್ಯದಲ್ಲಿ ಹುಟ್ಟಿದವರು ಶಾಂತರೂ, ಪಂಡಿತರೂ, ಧರ್ಮಯುತರೂ ಆಗುವರು.

ಆಶ್ಲೇಷಾ—ಶಠಃ ಸರ್ವಭಕ್ಷ್ಯಃ ಪಾಪಃ ಕೃತಘ್ನ ಧೂರ್ತಶ್ಚ ಭೌಜಂಗೇ | ಬುಧನು ಬಲಿಷ್ಠನಿದ್ದರೆ ಈ ಅವಗುಣಗಳು ಮರೆಯಾಗುವವು.

ಮಘಾ — **ಬಹು ಭೃತ್ಯಧನ ಭೋಗೀ ಸುರಪಿತೃಭಕ್ತಃ ಮಹೋದ್ಯಮಃ ಪಿತ್ರ್ಯೇ** | ಸೇವಕರಿಂದ, ಧನದಿಂದ ಯುಕ್ತನು, ಭೋಗಿಯು, ಸುರರಲ್ಲಿ ಪಿತೃಗಳಲ್ಲಿ ಭಕ್ತಿಯುಳ್ಳವನು, ದೊಡ್ಡ ಉದ್ಯಮಶೀಲನು ಮಘಾ ನಕ್ಷತ್ರದಲ್ಲಿ ಹುಟ್ಟುವನು.

**ಪೂರ್ವಾ—** (ಹುಟ್ಟಿ) ಪ್ರಿಯವಾಗ್ದಾತಾ ದ್ಯುತಿಮಾನ್ ಅಟನಃ ನೃಪ ಸೇವಕೋ ಭಾಗ್ಯೇ | ಪ್ರಿಯಭಾಷೀ, ದಾತಾ, ಕಾಂತಿಮಂತ, ಅಟನ ಶೀಲ, ರಾಜಸೇವೆ ಆಗುವನು.

**ಉತ್ತರಾ—** ಸುಭಗೋ ವಿದ್ಯಾಪ್ತಧನೋ ಭೋಗೀ ಸುಖಭಾಕ್ ದ್ವಿತೀಯ ಫಾಲ್ಗುನ್ಯಾಂ | ಸೌಭಾಗ್ಯವಂತ, ವಿದ್ಯೆಯಿಂದ ದುಡ್ಡನ್ನು ಗಳಿಸುವವ, ಭೋಗಿ—ಸುಖಿ.

**ಹಸ್ತಾ—** 'ಉತ್ಸಾಹೀ ಧೃಷ್ಟಃ ಪಾನಪಃ ಅಘೃಣೀ ತಸ್ಕರೋ ಹಸ್ತೇ' ಉತ್ಸಾಹೀ, ಧೈರ್ಯಶಾಲಿ, ನಿರ್ಲಜ್ಜ, ಮದ್ಯಪಾಯಿ, ಚೋರ. (ಚಂದ್ರ, ಗುರು ತ್ರಿಕೋಣವು ಈ ಅವಗುಣಗಳನ್ನು ಹಿಂದೆ ಸರಿಸುವದು)

ಚಿತ್ರಾ — ಚಿತ್ರಾಂಬರ ಮಾಲ್ಯಧರಃ ಸುಲೋಚನಾಂಗಶ್ಚ ಭವತಿ ಚಿತ್ರಾಯಾಂ

ಅನೇಕ ವರ್ಣಗಳ ವಸ್ತ್ರ, ಕುಸುಮ ಮಾಲೆಗಳನ್ನು ಧರಿಸುವವ **ಸುಂದರ** ನೇತ್ರ, ಸುಂದರ ಶರೀರವುಳ್ಳವನು ಆಗುವನು.

**ಸ್ವಾತೀ—** 'ದಾಂತೋ ವಣಿಕ್ ಕೃಪಾಲುಃ ಪ್ರಿಯವಾಕ್ ಧರ್ಮಾ-ಶ್ರಿತಃ ಸ್ವಾತೌ' | ಅರ್ಥವು ಸುಲಭ.

**ವಿಶಾಖಾ** — ' ಈರ್ಷ್ಯ ಲುಬ್ಧೋ ದ್ಯುತಿಮಾನ್ ವಚನ ಪಟುಃ ಕಲಹಕೃತ್ ವಿಶಾಖಾಸು ' । ಮತ್ಸರೀ, ಲೋಭಿ, ಕಾಂತಿವಂತ, ವಚನ-ಪಟು, ಕಲಹಕಾರೀ ಆಗುವನು.

**ಅನುರಾಧಾ** — ಆಢ್ಯೋ ವಿದೇಶವಾಸೀ ಕ್ಷುಧಾಲುರಟನೋಽನು-ರಾಧಾಸು. .

ಧನವಾನ್, ವಿದೇಶವಾಸೀ, ಹಸಿವೆಯುಳ್ಳವ, ಅಟನಶೀಲ (ಭ್ರಮಣ-ಕಾರೀ. )

He will be a magistrate ಎಂದು ಬಿ. ವ್ಹಿ. ರಾಮನ್ನರ ಅಭಿಪ್ರಾಯ

**ಜ್ಯೇಷ್ಠಾ**ಸು ಬಹುಮಿತ್ರಃ ಸಂತುಷ್ಟೋ ಧರ್ಮಕೃತ್ ಪ್ರಚುರ ಕೋಪಃ । **ಮೂಲೇ** ಮಾನೀ ಧನವಾನ್ ಸುಖೀ ನ ಹಿಂಸ್ರಃ ಸ್ಥಿರೋ-ಭೋಗೀ । ಮೂಲಾನಕ್ಷತ್ರದಲ್ಲಿ ಅನೇಕ ಭೇದಗಳನ್ನು ಮಾಡಿ ಭಿನ್ನ ಭಿನ್ನ ಫಲಗಳನ್ನು ಹೇಳುವರು.

**ಪೂರ್ವಾಷಾಢಾ**— ಇಷ್ಟಾನಂದಕಲತ್ರೋ ಮಾನಿ-ದೃಢ ಸೌಹೃದಷ್ಟ ಜಲದೇವೇ.

ಇಷ್ಟಗಳನ್ನು ಪೂರೈಸುವ, ಆನಂದವನ್ನುಂಟು ಮಾಡುವ ಹೆಂಡತಿ ಇರುವಳು. ಮಾನವುಳ್ಳವ, ಗಟ್ಟಿಯಾದ ಮೈತ್ರಿ ಇರುವದು.

**ಉತ್ತರಾಷಾಢಾ**— ವೈಶ್ಯೇ ವಿನೀತ ಧಾರ್ಮಿಕ ಬಹುಮಿತ್ರ ಕೃತಜ್ಞ ಸುಭಗಶ್ಚ ।

**ಶ್ರವಣಾ**— ಶ್ರೀಮಾನ್ ಶ್ರವಣೇ ಶ್ರುತವಾನ್ ಉದಾರದಾರೋ ಧನಾನ್ವಿತಃ ಖ್ಯಾತಃ.

**ಧನಿಷ್ಠಾ**— ದಾತಾಢ್ಯ ಶೂರ ಗೀತಪ್ರಿಯೋ ಧನಿಷ್ಠಾಸು ಧನಲುಬ್ಧಃ

ಶತಭಿಷಕ್ (ಶತತಾರಾ)—ಸ್ಫುಟವಾಕ್ ವ್ಯಸನೀ ರಿಪುಹಾ ಸಾಹಸಿಕಃ ಶತಭಿಷಜಿ ದುರ್ಗ್ರಾಹ್ಯಃ । ರಾಹುವಿಗೆ ಬಲವಿದ್ದರೆ ಅವನ ಸದ್ಗುಣಗಳೇ ತೋರುವವು.

**ಪೂರ್ವಾಭಾದ್ರಪದ** — ಭಾದ್ರಪದಾಸೂದ್ವಿಗ್ನಃ ಸ್ತ್ರೀಜಿತಧನೀ ಪಟುರ್ದಾತಾ । ದುಃಖೀ, ಸ್ತ್ರೀವಶ, ಜಾಣನಾದರೂ ಕೃಪಣನು.

**ಉತ್ತರಾಭಾದ್ರಪದ**— ವಕ್ತಾ ಸುಖೀ, ಪ್ರಜಾವಾನ್ ಜಿತಶತ್ರುಃ ಧಾರ್ಮಿಕೋ ದ್ವಿತೀಯಾಸು । ವಕ್ತಾ, ಸುಖೀ ಸಂತತಿವಂತನು, ಶತ್ರುಗಳನ್ನು ಗೆಲ್ಲುವವನು, ಧಾರ್ಮಿಕನು.

ರೇವತಿ— ಸಂಪೂರ್ಣಾಂಗಃ ಸುಭಗಃ ಶೂರಃ ಶುಚಿರರ್ಥವಾನ್ ಪೌಷ್ಣೇ ।

ರೇವತಿಯಲ್ಲಿ ಹುಟ್ಟಿದವನು ಸಂಪೂರ್ಣ ಅವಯವವುಳ್ಳವನು, ಸೌಭಾಗ್ಯಶಾಲಿ, ಶೂರನು, ಶುದ್ಧನು, ಧನಿಕನು ಆಗುವನು.



# ಉಪಸಂಹಾರ

ಅಷ್ಟಕವರ್ಗ ಪದ್ಧತಿಯ ಉಪಸಂಹಾರದಲ್ಲಿ ಕೆಲವು ಮುಖ್ಯ ಸಂಗತಿಗಳನ್ನು ಹೇಳಬೇಕಾಗಿರುವದು. ಇತರ ಪದ್ಧತಿಯ ಕುಂಡಲಿಗಳೊಡನೆಯೂ ತುಲನೆ ಮಾಡಿ ಕೆಲವು ಮಾತುಗಳನ್ನು ಇಲ್ಲಿ ಹೇಳುವೆವು.

## ನಿರಯನ ಅಂಶಾತ್ಮಕ ಕುಂಡಲಿ




ಲಗ್ನಾಂಶ— ೧೬.೪೨

ಜನ್ಮ ದಿನಾಂಕ ೧೬—೩—೧೯೦೮. ಜನ್ಮ ಸಮಯ– ಸೂರ್ಯೋ-ದಯದಿಂದ ೧೨ ಗಳಿಗೆ ೨ ಪಳ. ಅಕ್ಷಾಂಶ:— ೧೫–೩೫
ರೇಖಾಂಶ :— ೭೫ ೪೫

ಅಯನಾಂಶ :—೨೧.೬.

**ಜೈಮಿನಿ ಮತದಂತೆ ಆತ್ಮಕಾರಕ ನವಾಂಶ ಕುಂಡಲಿ**




ಲಗ್ನದಲ್ಲಿ ಸ್ವಕ್ಷೇತ್ರದ ಮಂಗಳ. ಭಾಗ್ಯದಲ್ಲಿ ಸ್ವಕ್ಷೇತ್ರದ ಚಂದ್ರ. ಕರ್ಮದಲ್ಲಿ ಸ್ವಕ್ಷೇತ್ರದ ರವಿ. ೩ ಗ್ರಹಗಳು ಬಲಿಷ್ಠವಾಗಿದ್ದರೆ **ರಾಜಯೋಗ.**

ಇಲ್ಲಿ "ಲೇಯಲಾಭಯೋಃ ಪರಕಾಲೇ" ಎಂಬ ಸೂತ್ರವನ್ನು ಸಮನ್ವಯ ಮಾಡಬಹುದಾಗಿ ತೋರುವದು. ಈ ಸೂತ್ರದ ಅರ್ಥವಿಷ್ಟೇ:

ಲಗ್ನ ಪಂಚಮನಾಥರ, ಲಗ್ನ ಸಪ್ತಮನಾಥರ ಯೋಗವು ಉತ್ತರ ವಯಸ್ಸಿನಲ್ಲಿ ರಾಜಯೋಗ ಫಲವನ್ನು ಕೊಡುವದು. ಇದೇ ಅರ್ಥವನ್ನು ವಿಸ್ತರಿಸಿ ಪರಾಶರರು ಹೀಗೆ ಹೇಳಿದ್ದಾರೆ.

**ಮಂತ್ರೇಶೋಽಮಾತ್ಯತಾಂ ಯಾತಿ । ಸಪ್ತಮಾಧೀಶ ಯೋಗತಃ ।**
**ಕರ್ಮೇಶಸ್ಯ ತು ಯೋಗೇನ ರಾಜಸಾಚಿವ್ಯ ತಾಮಿಯಾತ್ ।**

ಇಲ್ಲಿ ಕರ್ಮೇಶ ರವಿಯು ಸಪ್ತಮಾಧೀಶನ ಯೋಗದಲ್ಲಿ ಕರ್ಮದಲ್ಲಿದ್ದು ಪಂಚಮೇಶ ಗುರುವಿನ ದೃಷ್ಟಿಯಲ್ಲಿರುವನು. ಈ ದೃಷ್ಟಿ ಜೈಮಿನಿ ಪದ್ಧತಿಯಂತೆ. ಲಗ್ನದಲ್ಲಿ ಮಂಗಳ, ಲಗ್ನಕ್ಕೆ ಬಲವನ್ನು ಕೊಟ್ಟಿರುವನು. ಭಾಗ್ಯಕ್ಕೆ ಚಂದ್ರನು. ಜೈಮಿನಿ ಪದ್ಧತಿಯಂತೆ ಪರಸ್ಪರ ದೃಷ್ಟಿಯಲ್ಲಿರುವರು. ಜೈಮಿನಿ ಮತದಂತೆ ಧನು, ವೃಶ್ಚಿಕ ರಾಶಿಗಳ ದಶೆ.... ೫೩ ನೇ ವರುಷದಿಂದ ೬೨ ನೆಯ ವರ್ಷದ ವರೆಗೆ ಇರುವದು. ಇವೆರಡೂ ಗ್ರಹಗಳು ಬಲಿಷ್ಠವಿರುವವು. ಗುರು ಉಚ್ಚ ರಾಶಿಯಲ್ಲಿ, ಮಂಗಳನು ಸ್ವಭವನದಲ್ಲಿ—ಕರ್ಮಸ್ಥಾನದಲ್ಲಿ, ಗುರು–ರವಿಗಳು ಚರರಾಶಿಯಲ್ಲಿ ಇರುವದರಿಂದ ಇವರ ದೃಷ್ಟಿ ಬೀಳುವದು. ಸರ್ವಾಷ್ಟಕವರ್ಗದಲ್ಲಿ ೫೭–೫೫ ನೇ ವರುಷಗಳು ಗುರು–ಶುಕ್ರರವು ಬರುವವು. ೫೫ ನೇ ವರ್ಷ ಗೋಚರ ಗುರುವೂ ತನ್ನ ಅಷ್ಟಕವರ್ಗದಲ್ಲಿ ೧೯೬೨ ನೆಯ ಇಸವಿಯಲ್ಲಿ, ೭ ಬಿಂದುಗಳಿರುವ ಕುಂಭದಲ್ಲಿ ಸಂಚರಿಸಿದನು. ೫೫–೫೬–೫೭ ಈ ವರುಷಗಳಲ್ಲಿ ಫ್ಯಾಕಲಂಡರ ನವಾಂಶ ಪದ್ಧತಿಯಂತೆಯೂ ಗುರು–ರವಿಗಳ ಶುಭ ದೃಷ್ಟಿಪಾತವಿತ್ತು.

## ಆಧಾನ ಕುಂಡಲಿ ( ಸಾಯನ )

೧೦—೬—೧೯೦೭. ಮುಂಜಾನೆ ೧೧—೬



ಆಧಾನ ಜ್ಯೋತಿರ್ವಿದರಿಂದು ಪ್ರಖ್ಯಾತರಾದ ಬೆಲಿಯವ್ವರ ನಿಯಮ ವನ್ನು ಅನುಸರಿಸಿ ತಯಾರಿಸಿರುತ್ತದೆ.

ಈ ಕುಂಡಲಿಯಿಂದ ದಿನವರ್ಷ ಪದ್ಧತಿಯಂತೆ ಲೆಕ್ಕಮಾಡಿದರೆ ಚಲಿತ ಗುರು ೨೬ ಅಂಶಕ್ಕೆ ಬರುವನು. ೫೩ ದಿವಸಕ್ಕೆ ಅರ್ಥಾತ್ ೫೩ ನೆಯ ವರ್ಷದಿಂದ ಅವನು ಮೂಲ ಶನಿಯೊಡನೆ ತ್ರಿಕೋಣಯೋಗ ಮಾಡಹತ್ತುವನು. ಮುಂದೆ ಚಲಿತ ಶನಿಯೊಡನೆ—ಅಂತೂ ೮-೧೦ ವರ್ಷ ಈ ಯೋಗ ನಡೆಯುವದು. ೫೫ ನೇ ವರ್ಷ, ೫೬ನೇ ವರ್ಷ ಈ ಯೋಗ ಪೂರ್ಣವಾಗುವದು. ಗುರು, ಶನಿಗಳು ಆಧಾನಕುಂಡಲಿಯಲ್ಲಿ ಚತುರ್ಥ

ಪಂಚಮಾಧಿಪತಿಗಳು ಇರುವರು. ಕೇಂದ್ರ ತ್ರಿಕೋಣ ಸಂಬಂಧ ಬರುವದು. ಗುರು ಉಚ್ಚದಲ್ಲಿ ಲಾಭದಲ್ಲಿರುವನು. ಇದು ಅಷ್ಟಕವರ್ಗ ಪದ್ಧತಿಯ ಫಲಿತಕ್ಕೆ ಹೇಗೆ ಮೇಳಗೂಡುವದೆಂಬುದನ್ನು ವಾಚಕರು ಅರಿತು ನೋಡಬೇಕು. ಜನ್ಮಕಾಲೀನ ಸಾಯನ ಕುಂಡಲಿಯಿಂದಲೂ ಈ ಯೋಗವು ೫೩ ನೇ ವರ್ಷದಿಂದ ಪೂರ್ಣವಾಗುತ್ತ ನಡೆದಿರುವದು. ೫೭-೫೮ ವರ್ಷಕ್ಕೆ ಪೂರ್ಣವಾಗಿದೆ. ಇದು ಮಾನ, ಅಧಿಕಾರ, ಗೌರವಗಳನ್ನು ಕೊಡುವ ಯೋಗ. ಈ ಯೋಗವು ಅಗ್ನಿ ( ಓಜಸ್ವಿ ) ರಾಶಿಗಳಲ್ಲಾಗುತ್ತಿರುವದು. ೬೨-೬೩ ವರ್ಷಗಳಲ್ಲಿ ರವಿ, ಗುರು ಸಮಕ್ರಾಂತಿ ಯೋಗವಿದೆ. ವಾರ್ಧಕ್ಯದಲ್ಲಿ ಕೂಡ ಗೌರವ-ಮಾನಗಳನ್ನು, ಶಾಂತಿಯನ್ನು ಕೊಡುವದು. ಇದು ಸಂಜೀವನೀಮಂತ್ರವಿದ್ದಂತೆ ಎಂದು ಪಶ್ಚಿಮದ ಜ್ಯೋತಿರ್ವಿದರು ಹೇಳುವರು. ಅಷ್ಟಕವರ್ಗ ಪದ್ಧತಿಯೂ ಹೆಚ್ಚು ಬಿಂದುಗಳಿಂದ ವಾರ್ಧಕ್ಯದಲ್ಲಿ ಹೆಚ್ಚು ಸುಖ ಉಂಟು ಎಂದು ಹೇಳುವದು.

ಅಷ್ಟಕವರ್ಗ ಪದ್ಧತಿಯು ಮಧ್ಯಮಾಯುಜಾತಕವೆಂದು ಹೇಳುವದು. ಸಾಯನ ಪದ್ಧತಿಯಲ್ಲಿ ರವಿ— ಶನಿಯೋಗವು ದೀರ್ಘಾಯುವನ್ನು ಹೇಳಲಾರದು. ಪರಾಶರ ಮತದಂತೆ ಅದು ಯೋಗಕಾರಕವಿರಬಹುದು.

ತಂದೆ ಮಕ್ಕಳಿಬ್ಬರಿಗೂ ( ರವಿ. ಶನಿ ) ಶತ್ರುತ್ವವಿರುವದರಿಂದ ದೀರ್ಘಾಯು ದ್ಯೋತಕರಲ್ಲ. ಮಧ್ಯಾಯು ಎಂದರೆ ಸುಮಾರು ೭೦ ವರ್ಷ. ಇಷ್ಟು ವಿಚಾರ ಈ ಪುಸ್ತಕದಲ್ಲಿ ಸಾಕು. ಕೇವಲ ಆಯುರ್ದಾಯದ ವಿಚಾರವನ್ನೇ ಮಾಡುವದಾದರೆ ಆರ್ಯರ ೧೦-೮ ಪದ್ಧತಿಗಳನ್ನು ಪಾಶ್ಚಾತ್ಯರ ಮೃತ್ಯುಸಹನು ಬಿಂದುವನ್ನು ವಿಚಾರದಲ್ಲಿ ತಕ್ಕೊಳ್ಳಬಹುದು.

ಯಾವದೊಂದು ಕುಂಡಲಿಯನ್ನು ವಿಚಾರಿಸುವಾಗ ವಾಚಕರು ಅವಸರ ಮಾಡದೆ ಕನಿಷ್ಠ ೩-೪ ಪದ್ಧತಿಗಳಿಂದಾದರೂ ಸಾವಧಾನದಿಂದ ವಿಚಾರಿಸಿ ಫಲಿತವನ್ನು ಹೇಳುವ ರೂಢಿಯನ್ನಿಡಬೇಕು. ಅಂದರೇ ಜ್ಯೋತಿಃ ಶಾಸ್ತ್ರದ ಮೇಲೆ ಬರುವ ಆರೋಪಗಳು ದೂರಾಗುವವು. ಈ ಶಾಸ್ತ್ರಕ್ಕೆ ಅನೇಕ ವರ್ಷಗಳ ಅಭ್ಯಾಸವೂ, ಬಲವತ್ತರ ರಾಜಾಶ್ರಯವೂ ಬೇಕು. ಅಷ್ಟಕ-

ವರ್ಗ ಪದ್ಧತಿಯ ಜ್ಯೋತಿರ್ವಿದರಿಗೆ ಮೊದಲು ಸಂಸ್ಥಾನಿಕರ ಆಶ್ರಯವಿತ್ತು. ಈ ಪದ್ಧತಿಯಲ್ಲಿ ತಜ್ಞನಾದ ಬಲಭದ್ರನಿಗೆ ಔರಂಗಜೇಬನ ತಮ್ಮನಾದ ಶಹಾಸೂಜಾನ ಆಶ್ರಯವಿತ್ತು. ಪ್ರಜರು ಜಾಗೃತರೂ ಸುಸಂಸ್ಕೃತರೂ ಆದಲ್ಲಿ ಈ ಶಾಸ್ತ್ರಕ್ಕೆ ಪ್ರಜಾಶ್ರಯವೂ ದೊರಕಬಹುದು.

ಶ್ರೀ ರಂಗಭಟ್ಟ ತನಯಃ ಕಿಲ ಕೇಶವಾಖ್ಯಃ
ಜ್ಯೋತಿರ್ವಿದಾಂ ವರಕುಲೇ ಜನುಷಂ ಪ್ರಸನ್ನಃ ।
ಪಾಶ್ಚಾತ್ಯ ಪೌರ್ವಾತ್ಯಮತಂ ನಿರೀಕ್ಷ್ಯ ।
ಜಾತಸ್ಯ ಜಾತಕಮಿದಂ ಪ್ರಣಿನಾಯ ನೂನಂ ।



# ಆಧಾರ ಗ್ರಂಥಗಳು

ಬೃಹತ್ ಪಾರಾಶರ ಹೋರಾ. ( ವೆಂಕಟೇಶ್ವರ ಸ್ಟೀಮ್ ಪ್ರೆಸ್, ಮುಂಬಯಿಯಲ್ಲಿ ಪ್ರಕಟಿತವಾದದ್ದು.)

ಲಘುಪಾರಾಶರೀ. ( ಶ್ರೀ. ಪರಾಂಡೆಯವರ ಮರಾಠಿ ಟೀಕೆಯಿಂದ ಕೂಡಿದ್ದು. )

ಬೃಹಜ್ಜಾತಕ ( ವಾಲಿ ಪ್ರತಿ-ತಂದೆಯವರ ಸಂಗ್ರಹದಲ್ಲಿದ್ದದ್ದು. ಉತ್ಪಲ ಟೀಕೆಯಿಂದ ಕೂಡಿದ್ದು.)

ಬೃಹಜ್ಜಾತಕ — ಬನಾರಸ ಚೌಖಂಬಾ ಪುಸ್ತಕಾಲಯ ಹಿಂದೀ ಟೀಕೆಯಿಂದ ಕೂಡಿದ್ದು.

ಬೃಹಜ್ಜಾತಕ — ಶ್ರೀ ಬೆಂಗಳೂರ ಸೂರ್ಯನಾರಾಯಣರಾಯರ ಇಂಗ್ಲೀಷ್ ಭಾಷಾಂತರ.

ಜಾತಕ ಪಾರಿಜಾತ—ನವಾಥೆಯವರ ಮರಾಠಿ ಟೀಕೆಯಿಂದ ಕೂಡಿದ್ದು.

ಜಾತಕ ಪಾರಿಜಾತ— ಬೆಂಗಳೂರ ಸುಬ್ರಹ್ಮಣ್ಯ ಶಾಸ್ತ್ರಿಗಳ ಇಂಗ್ಲೀಷ್ ಟೀಕೆಯೊಡನೆ.

ಹಿಂದೂ ಪ್ರಿಡಿಕ್ಟಿವ್ಹ ಎಸ್ಟ್ರಾಲಾಜಿ— ಬಿ. ವ್ಹಿ. ರಾಮನ್ನರಿಂದ ಬರೆಯಲ್ಪಟ್ಟದ್ದು.

ಅಷ್ಟಕವರ್ಗ— ( ಶ್ರೀ ಸಿ ಎಸ್. ಪಟೇಲ, ಬಿ. ಎ , ಸಿ. ಎ. ಸುಬ್ರಮಣಿಯ ಅಯ್ಯರ ಬಿ. ಎಸ್‌ಸಿ. ) ಈ ಉಭಯ ಜ್ಯೋತಿರ್ವಿದರು ಇಂಗ್ಲೀಷ್‌ದಲ್ಲಿ ವಿವರಣೆಯೊಂದಿಗೆ ಪ್ರಕಟಿಸಿದ್ದು.

ಜ್ಯೋತಿಸ್ತತ್ವ — ಹಿಮಾಲಯ ಸಂಶೋಧಕ ಮಂಡಲದವರು ಪ್ರಕಟಿಸಿದ್ದು. ಭಾವಾರ್ಥ ರತ್ನಾಕರ– (ರಾಮಾನುಜಾರ್ಯರು ಬರೆದದ್ದು)

ಇಂಗ್ಲಿಷದಲ್ಲಿ ವಿವರಣೆ ಭಾವಾನುವಾದಗಳೊಂದಿಗೆ ಬಿ. ವ್ಹಿ. ರಾಮನ್ ಇವರಿಂದ ಇಂಗ್ಲಿಷ್‌ದಲ್ಲಿ ಪ್ರಕಟಿತವಾದದ್ದು.

ಪ್ರಶ್ನಮಾರ್ಗ— ಪುನ್ನಶ್ಶೇರಿನಂಪಿ ನೀಲಕಂಠ ಶರ್ಮರ ಟೀಕೆಯಿಂದ ಪ್ರಕಟಿತವಾದದ್ದು.

ನಾಡೀ ಎಸ್ಟ್ರಾಲಾಜಿ — ಮದ್ರಾಸದ ಆರ್. ಗೋಪಾಲಕೃಷ್ಣರಾಯರದು.

ಇದಲ್ಲದೆ ಬೆಂಗಳೂರಿನ ಬಿ. ವ್ಹಿ. ರಾಮನ್ನರ ಎಸ್ಟ್ರಾಲಾಜಿ ಮ್ಯಾಗೆಝಿನಿನಲ್ಲಿ ಪ್ರಕಟವಾದ ಅಷ್ಟಕವರ್ಗ ಪದ್ಧತಿಯ ಲೇಖನಗಳು.

ಮುಂಬೈ ಜ್ಯೋ. ಯ ಕೇ. ಪ್ರಧಾನರ ಜ್ಯೋತಿರ್ಮಾಲೆಯಲ್ಲಿ ಪ್ರಕಟಿತವಾದ ಲೇಖನಗಳು. ಮತ್ತು ದಿವಂಗತ ನವಾಥೆಯವರ ಕುಂಡಲಿ ಜ್ಞಾನದಲ್ಲಿ ಪ್ರಕಟಿತವಾದ ಲೇಖನಗಳು ಇತ್ಯಾದಿ.

ಇದಲ್ಲದೆ ಅನೇಕ ಮರಾಠಿ, ಸಂಸ್ಕೃತ, ಇಂಗ್ಲೀಷ್ ಗ್ರಂಥಗಳ ಅಭ್ಯಾಸದಿಂದುಂಟಾದ ಸಂಸ್ಕಾರದ ಆಧಾರ. ಮುಖ್ಯವಾಗಿ ದಿವಂಗತರಾದ ತಂದೆಯವರ ಆಶೀರ್ವಾದದ ಆಧಾರ.

ಈ ಪ್ರಾಚೀನ—ಅರ್ವಾಚೀನ ಗ್ರಂಥಕಾರರಿಗೆಲ್ಲ ಲೇಖಕನು ಕೃತಜ್ಞತೆಗಳನ್ನು ಸಮರ್ಪಿಸುವನು.



# ಅಭಿಪ್ರಾಯಗಳು

## ೧

ಪರಮಾತ್ಮನ ಸೃಷ್ಟಿಯು ಅಗಾಧ ಮಹಿಮೆಯುಳ್ಳದ್ದು. 'ವಿಧಾತಾ ವಿಶ್ವಸೃಡ್ವಿಧಿಃ' ಎಂದು ಸೃಷ್ಟಿಕರ್ತನೆಂದು ಪ್ರಸಿದ್ಧನಾದ ಚತುರ್ಮುಖ ಬ್ರಹ್ಮನ 'ನಿತ್ಯಾವಿಯೋಗಿನಿ'ಯಾದ ಪ್ರಕೃತ್ಯಭಿಮಾನಿನಿಯಾದ ಲಕ್ಷ್ಮೀದೇವಿಯೂ ಅನಂತಕೋಟಿ ಬ್ರಹ್ಮಾಂಡನಾಯಕನಾದ ಆ ನಾರಾಯಣನ ವಿಚಿತ್ರ ಲೀಲೆಯನ್ನು ಸಾಕಲ್ಯೇನ ತಿಳಿಯಲು ಸಮರ್ಥರಾಗಿಲ್ಲ. ತ್ರಿಗುಣಾತ್ಮಕವಾದ ಅವ್ಯಕ್ತತತ್ತ್ವದ ಸತ್ವರಜಸ್ತಮೋಗುಣಗಳ ಉಪಚಯಾಪಚಯ ಕ್ರಮದಿಂದ ಮಹತ್ತ್ವ, ಅಹಂಕಾರತತ್ತ್ವ, ಮನಸ್ತತ್ತ್ವ, ಪಂಚ ಮಹಾಭೂತಗಳು, ಪಂಚ ತನ್ಮಾತ್ರಗಳು (ವಿಷಯಗಳು) ಇತ್ಯಾದಿಯಾಗಿ ತತ್ವಸೃಷ್ಟಿ ಮಾಡಿ ಅಲ್ಲಿ ಚೈತನ್ಯವನ್ನು ಹುಟ್ಟಿಸಲಿಕ್ಕೆ ಅಭಿಮಾನಿ ದೇವತೆಗಳನ್ನು ಪ್ರವೇಶ ಮಾಡಿಸಿ 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂದು ಹೇಳಿದಂತೆ ಸರ್ವತ್ರ ವ್ಯಾಪಾರಗಳನ್ನು ಸುಸಂಬದ್ಧವಾಗಿ ನಿಯಂತ್ರಿಸಲಿಕ್ಕೆ 'ಭ್ರಾಮಯನ್ ಸರ್ವ ಭೂತಾನಿ ಯಂತ್ರಾರೂಢಾನಿ ಮಾಯಯಾ' ಎಂಬಂತೆ ಅಂಗ ಪ್ರತ್ಯಂಗಗಳಲ್ಲಿ ಅಧ್ಯಕ್ಷನಾಗಿ ಅಂತರ್ನಿಯಾಮಕನಾಗಿದ್ದಾನೆ. ಹೀಗೆ ಭೂ ಭೂಧರಾದಿ ವಿರಾಟ್ ಸೃಷ್ಟಿಯನ್ನು ಮಾಡಿ ಅಲ್ಲಿ ತಾನು 'ವಿಶ್ವ' ಎಂದು ಪ್ರಸಿದ್ಧನಾಗಿದ್ದಾನೆ. ಅದೇ ಇಪ್ಪತ್ತುನಾಲ್ಕು ತತ್ವಗಳಿಂದ ಪಿಂಡಸೃಷ್ಟಿಯನ್ನು ಮಾಡಿ, ಅಲ್ಲಿಯೂ ಆ ಆ ದೇವತೆಗಳನ್ನು ಪ್ರವೇಶ ಮಾಡಿಸಿ ಕರ್ಮಬದ್ಧನಾದ ಜೀವನಿಗೆ ಅವನವನ ಕರ್ಮಾನುಸಾರವಾದ ಪಿಂಡವನ್ನು (ದೇಹ ಸಂಬಂಧವನ್ನು) ಕೊಡುವನು. ಕರ್ಮ, ಅದೃಷ್ಟಾದಿಗಳ ಶಕ್ತಿಗನುಣವಾಗಿ ಅಭಿಮಾನಿಯಾದ ಜೀವನಿಂದ ಆ ದೇಹದ ಅಧಿಷ್ಠಾನದಲ್ಲಿ ದೇವತೆಗಳ ಸಹಾಯದಿಂದ ಮುಂದಿನ ಜೀವನದಲ್ಲಿ

ಕರ್ಮಾದಿಗಳನ್ನು ಮಾಡಿಸಿ ಅವನಿಗೆ ಆ ಕರ್ಮಗಳ ಫಲವನ್ನು ಅನುಭವಕ್ಕೆ ತಂದು ಕೊಡುವನು. ವಿರಾಟ್ ದೃಷ್ಟಿಗೂ ಪಿಂಡಸೃಷ್ಟಿಗೂ ಸಾಮರಸ್ಯವೂ ಏಕತಾನತೆಯೂ ಉಂಟು ಅಣುರೇಣು ತೃಣಕಾಷ್ಠಗಳಲ್ಲಿಯೂ (ಹುಲ್ಲು-ಕಡ್ಡಿಯಲ್ಲಿಯೂ) ಮೇರು ಮಂದರಾದಿ ಪರ್ವತಗಳಲ್ಲಿಯೂ ವಾಪೀಕೂಪತಟಾಗ—ಸರೋವರ, ನದೀ - ನದ ಸಮುದ್ರಾದಿ ಜಲಾಶಯಗಳಲ್ಲಿಯೂ ಅವ್ಯಕ್ತನಾದ ಪರಮಾತ್ಮನು ತನ್ನ ಅಘಟಿತ ಘಟನಾಪಟುವಾದ ಲೀಲೆಗಳನ್ನು ಮಾಡುತ್ತ ವಿರಾಜಮಾನನಾಗಿದ್ದಾನೆ ಅದೇ ಪರಮಾತ್ಮನು ಆಕಾಶದಲ್ಲಿ ಹೊಳೆಯುವ ಜ್ಯೋತಿಶ್ಚಕ್ರವನ್ನೂ ಸೃಷ್ಟಿಸಿ ಅಲ್ಲಿ ಆದಿತ್ಯ, ಚಂದ್ರಾದಿ ನವಗ್ರಹದೇವತೆಗಳನ್ನು ಇರಿಸಿ, ತಾನೂ ಅಧ್ಯಕ್ಷನಾಗಿ ಇದ್ದು ಸಮಸ್ತ ಜಗತ್ತಿಗೂ ಚೈತನ್ಯವನ್ನೂ ಪೋಷಣೆಯನ್ನೂ ಕೊಡುತ್ತಿರುವನು. ಈ ಪಿಂಡಾಂಡ, ಬ್ರಹ್ಮಾಂಡ ಸೃಷ್ಟಿಯಲ್ಲಿ ಅಗಾಧವಾದ ಪರಸ್ಪರ ಸಂಬಂಧ, ಸಹಕಾರಗಳಿರುವವು. ಹುಲ್ಲುಕಡ್ಡಿಯಲ್ಲಿರುವ ಪರಮಾತ್ಮನ ಶಕ್ತಿಯೂ -ಲೋಕಾಲೋಕಗಳಲ್ಲಿರುವ ಅವನ ಶಕ್ತಿಯೂ ಒಂದೇ ಆಗುವದು. ಅಭಿವ್ಯಂಜಕ ಸಾಮಗ್ರಿಯ ಬಲಾಬಲದ ಮೇರೆಗೆ ಅವನು ತನ್ನ ಶಕ್ತಿಯನ್ನು ಪ್ರಕಟಮಾಡುವನು. ಹಿರಣ್ಯಕಶಿಪುವಿನ ಆಸ್ಥಾನದ ಒಂದು ಕಂಬದಿಂದ ಪ್ರಹ್ಲಾದವರದನಾದ ನರಸಿಂಹನು ಪ್ರಾದುರ್ಭವ ತೋರಲಿಲ್ಲವೇ? ಜ್ಞಾನಿಗಳಾದವರು ಪರಮಾತ್ಮನನ್ನು ಈ ಬ್ರಹ್ಮಾಂಡ-ಪಿಂಡಾಂಡಗಳ ಸೃಷ್ಟಿಯ ಅಶೇಷ-ವಿಶೇಷಗಳಲ್ಲಿ ಸಾಮರಸ್ಯವನ್ನೂ ಪರಸ್ಪರ ಸಹಕಾರವನ್ನೂ ಕಂಡು ಬೆರಗಾಗಿ ಆ ಸೃಷ್ಟ್ಯಾದ್ಯಷ್ಟಕರ್ತನಾದ ನಾರಾಯಣನ ಮಹಿಮೆಯನ್ನು ಕೊಂಡಾಡುತ್ತ ಭಕ್ತಿಪರವಶರಾಗುವರು. ಪರಮಾತ್ಮನ ಇಂಥ ಅಗಾಧ ಮಹಿಮೆಯನ್ನು ತಿಳಿಸಲಿಕ್ಕೆ ಅನಾದಿನಿತ್ಯ ಅಪೌರುಷೇಯ ವೇದಗಳು ಪ್ರವೃತ್ತವಾಗಿವೆ. ಆ ವೇದಗಳನ್ನು ಅರ್ಥವಿಸಲಿಕ್ಕೆ ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಎಂಬ ಆರು ಅಂಗವಿದ್ಯೆಗಳು ಅವಶ್ಯವಾಗಿವೆ. ಈ ಸಾಂಗವೇದಗಳಿಂದ ಪರಮಾತ್ಮನ ನಿರಂಕುಶ ಮಾಹಾತ್ಮ್ಯವೂ ' ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ । ಪರಸ್ಪರಂ ಭಾವಯಂತಃ

ಶ್ರೇಯಃ ಪರಮವಾಪ್ಸ್ಯಥ' ( ಗೀತಾ ) ಎಂದು ಹೇಳಿದಂತೆ ಬ್ರಹ್ಮಾಂಡ ಪಿಂಡಾಂಡಗಳಲ್ಲಿ ಅಶೇಶ-ವಿಶೇಷಾಂಶಗಳಲ್ಲಿರುವ ಸಹಕಾರವೂ ವ್ಯಕ್ತವಾಗುತ್ತದೆ. 'ಭಕ್ತ್ಯರ್ಥಂ ಭಗವನ್ಮಹಿಮೋಕ್ತಿ' ಎಂಬಂತೆ ಭಗವಂತನಾದ ಪರಮಾತ್ಮನಲ್ಲಿ ಭಕ್ತಿಯುಂಟಾಗುತ್ತದೆ. ಆದ್ದರಿಂದ ಅಂಗಗಳಿಂದ ಸಹಿತವಾದ ವೇದಗಳ ಅಧ್ಯಯನವನ್ನು ನ್ಯಾಯಾನುಸಂಧಾನಪೂರ್ವಕವಾಗಿ ಮಾಡಿ ಎಲ್ಲ ಅಧಿಕಾರಿ ಜನರು ಕೃತಾರ್ಥರಾಗಬೇಕು.

ಬ್ರಹ್ಮಾಂಡದಲ್ಲಿರುವ ಸೃಷ್ಟಿಯ ಅಂಶಗಳೆಲ್ಲ ಪಿಂಡಾಂಡದಲ್ಲಿಯೂ ಅಷ್ಟೇ ಶಕ್ತಿಯಿಂದ ಸನ್ನಿಹಿತವಾಗಿವೆ. ಬಾಹ್ಯಭೌತಿಕ ಸೃಷ್ಟಿಯ ಪಂಚಮಹಾಭೂತಗಳಲ್ಲಿ ( ಪೃಥ್ವಿ, ಜಲ, ತೇಜಸ್ಸು, ವಾಯು, ಆಕಾಶ ) ವ್ಯತ್ಯಾಸವಾದರೆ ಬಾಹ್ಯಸೃಷ್ಟಿಯ ಜ್ಯೋತಿಶ್ಚಕ್ರವು ಅಂತರ ಸೃಷ್ಟಿಯಾದ ದೇಹದಲ್ಲಿಯೂ ಆಯಾಯ ಸ್ಥಾನಗಳಲ್ಲಿ ಸನ್ನಿಹಿತವಿದೆ. ಇಷ್ಟೇ ಅಲ್ಲ! ಬಾಹ್ಯಸೃಷ್ಟಿಯ ಅಣುರೂಪವು ಈ ದೇಹವಾದ್ದರಿಂದ ಅಲ್ಲಿ ಹೊರಗಿನ ಎಲ್ಲ ಬಲಾಬಲಗಳನ್ನು ಕಾಣಬಹುದು. ಇದನ್ನು ತಿಳಿದುಕೊಳ್ಳಲಿಕ್ಕೆ ಶಿಕ್ಷಾಕಲ್ಪಾದಿ ಅಂಗಗಳಿಂದಲೂ ಆಯುರ್ವೇದ ಧನುರ್ವೇದಾದಿ ಉಪಾಂಗಗಳಿಂದಲೂ ಮನುಷ್ಯನು ಸತತ ಪ್ರಯತ್ನ ಮಾಡುತ್ತಿದ್ದಾನೆ. ಶಿಕ್ಷಾಶಾಸ್ತ್ರವೆಂದರೆ ಸ್ವರಶಾಸ್ತ್ರವು. ಆಕಾಶ, ವಾಯುಗಳ ಸಹಕಾರದಿಂದ ಆವಿರ್ಭಾವ ಹೊಂದಿದ ಸ್ವರದಿಂದ ನಾದಬ್ರಹ್ಮನ ಜ್ಞಾನವನ್ನು ಮಾಡಿಕೊಳ್ಳುವರು. ಈ ವಿಜ್ಞಾನಿಗಳು ಸ್ವರಜ್ಞಾನಮಾತ್ರದಿಂದ ಪರಮಾತ್ಮನ ಅನುಗ್ರಹದಿಂದ ಭೂತಭವಿಷ್ಯದ್ವರ್ತಮಾನ ಸಂಗತಿಗಳನ್ನು ಆಕಲನ ಮಾಡಬಲ್ಲರು. ಈ ದಿಶೆಯಲ್ಲಿ ಹೊರಟ ಪ್ರಯತ್ನಗಳ ಅಲ್ಪಫಲವೆಂದರೆ, ಪಲ್ಲೀ ಶಕುನ, ಪಕ್ಷಿ ಶಕುನ ಇತ್ಯಾದಿ ವಿದ್ಯೆಗಳು. ಅದರಂತೆ ಚೈತನ್ಯಯುಕ್ತನಾದ ಬಾಹ್ಯ ಸೃಷ್ಟಿಯಲ್ಲಿಯ ಪಂಚಭೂತಗಳ ವಿಕಾರವನ್ನು ಈ ದೇಹದಲ್ಲಿ ಕಂಡುಹಿಡಿಯಲಿಕ್ಕೆ ವೈದ್ಯಶಾಸ್ತ್ರವು ಪ್ರವೃತ್ತವಾಯಿತು. ಈ ದೇಹದ ವಿಕಾರಗಳನ್ನು ಸರಿಯಾಗಿ ತಿಳಿದುಕೊಳ್ಳಲಿಕ್ಕೆ ನಾಡೀ ಪರೀಕ್ಷೆಯು ಉಪಾಯವಾಯಿತು. ಪ್ರತ್ಯಕ್ಷದಿಂದ ಅಪ್ರತ್ಯಕ್ಷವನ್ನು ನಿರ್ದೋಷವಾದ ಯುಕ್ತಿಗಳಿಂದ ಊಹಿಸ-

ಬೇಕಾಗುವದು. ಯುಕ್ತಿಗಳಲ್ಲಿ ದೋಷಗಳಿದ್ದರೆ ಆ ಬಲದಿಂದ ಬಂದ ಜ್ಞಾನವು ಸದೋಷವಾಗುವದು. ಆದರೆ ಕೆಲ ಸಿದ್ಧಪುರುಷರಿಗೆ ಮುಖದರ್ಶನ ಮಾತ್ರದಿಂದ ರೋಗಾದಿವಿಕಾರಗಳ ಜ್ಞಾನವಾಗುವದು. ಅವರಲ್ಲಿ ಯುಕ್ತ್ಯನುಸಂಧಾನವು ಅತಿ ಶೀಘ್ರಗತಿಯಿಂದ ಪಟುವಾಗಿ ನಡೆಯುತ್ತದೆಂದು ತಿಳಿಯಬಹುದು. ಅಲ್ಲಿ ನಡೆಯುವ ಅಶೇಷ ವಿಶೇಷ ವ್ಯಾಪಾರಗಳ ಜ್ಞಾನವು ಬ್ರಹ್ಮಾಂಡ-ಪಿಂಡಾಂಗಳ ಸೂಕ್ಷ್ಮ ಜ್ಞಾನವುಳ್ಳ ಚಿಕಿತ್ಸಕರಿಗೆ ಸಾಧ್ಯವಾಗುವದು.

ಇವೆಲ್ಲಕ್ಕಿಂತ ಅತ್ಯಂತ ಆಶ್ಚರ್ಯಕರವಾದ ಸೃಷ್ಟಿ ಭಾಗವೆಂದರೆ ಜ್ಯೋತಿಶ್ಚಕ್ರವು. ನಭೋಮಂಡಲದಲ್ಲಿ ಸಾಲುಸಾಲಾಗಿ ಹೊಳೆಯುತ್ತಿರುವ ಪ್ರಕಾಶಪೂರ್ಣವಾದ ಜ್ಯೋತಿರ್ಮಂಡಲವನ್ನು ಪ್ರತಿಯೊಬ್ಬನೂ ಪ್ರತ್ಯಕ್ಷ ನೋಡಬಲ್ಲನು; ನೋಡಿ ಆಶ್ಚರ್ಯಪಡುವನು; ಆನಂದವನ್ನು ಹೊಂದುವನು ಆದರೆ ಅಲ್ಲಿ ಕಾಣುವ ಗ್ರಹ ನಕ್ಷತ್ರಗಳ ಪರಸ್ಪರ ಸಹಕಾರ ಸಾಮರಸ್ಯಗಳನ್ನೂ ಪಿಂಡಾಂಡದಲ್ಲಿ ಅವುಗಳ ಪ್ರತೀಕಗಳನ್ನೂ, ಪ್ರತಿಕ್ರಿಯೆಗಳನ್ನೂ ತಿಳಿದು, ಅವು ಈ ಸೃಷ್ಟಿಯಲ್ಲಿ ಹೇಗೆ ಹಾಸುಹೊಕ್ಕಾಗಿ ನಿಂತಿವೆಯೆಂಬುದನ್ನು ಅರಿತರೆ ಆ ಸೂತ್ರಧಾರನಾದ ಪರಮಾತ್ಮನಲ್ಲಿ ಭಕ್ತಿ ಹುಟ್ಟುತ್ತದೆ. ಇದನ್ನು ತಿಳಿದುಕೊಳ್ಳುವದಕ್ಕೆ ಮಾಡಿದ ಪ್ರಯತ್ನವೇ ಜ್ಯೋತಿಃಶಾಸ್ತ್ರವು. ಈ ಶಾಸ್ತ್ರದಲ್ಲಿ ಗಣಿತಭಾಗ ಮತ್ತು ಫಲಭಾಗ ಎಂದು ಎರಡು ಭಾಗಗಳಿರುವವು. ಗಣಿತ ಭಾಗದಿಂದ ಸ್ಪಷ್ಟವಾದ ಲೋಕಗಳ ಪರಿಮಾಣ, ಅಂತರ, ಗತಿ, ವೇಗಗಳನ್ನು ತಿಳಿದು ತಿಥಿ, ವಾರ, ನಕ್ಷತ್ರ, ಕರಣ, ಯೋಗಾದಿ ಪಂಚಾಂಗಗಳನ್ನು ಗೊತ್ತುಮಾಡಿಕೊಳ್ಳುವರು. ಇದರಿಂದ ಬಾಹ್ಯ ಸೃಷ್ಟಿಯಲ್ಲಿಯ ಜ್ಯೋತಿಶ್ಚಕ್ರದ ಯಾವ ಯಾವ ಅಂಶಗಳು ಎಷ್ಟು ಬಲದಿಂದ ಈ ಪಿಂಡಸೃಷ್ಟಿಯಲ್ಲಿ ಸನ್ನಿಹಿತವಾಗಿವೆಯೆಂಬುದನ್ನು ತಿಳಿಯಬಹುದು. ಬಾಹ್ಯವಿಕಾರಗಳ ಫಲವೂ ಅಂತರ ಸೃಷ್ಟಿಯಲ್ಲಿ ಆಗಬೇಕೆಂದು ಬಲಾಬಲವಿಚಾರದಿಂದ ಜ್ಯೋತಿರ್ವಿದರು ಕಂಡುಹಿಡಿದಿದ್ದಾರೆ. ಈ ಬಾಹ್ಯ ಅಂತರ ಜ್ಯೋತಿಶ್ಚಕ್ರಗಳ ವ್ಯಾಪಾರಗಳನ್ನೂ ಅವುಗಳಲ್ಲಿ ಪರಸ್ಪರ ಸಹಕಾರ ಪ್ರತಿಯೋಗಗಳಿಂದಾಗುವ ವಿಕಾರಗಳನ್ನೂ

ಸೂಕ್ಷ್ಮದರ್ಶಿಗಳಾದ ಜ್ಯೋತಿರ್ವಿದರು ಯುಕ್ತಿಗಳ ಬಲದಿಂದ ಕಂಡುಹಿಡಿ-ದಿದ್ದಾರೆ. ಇವೆಲ್ಲ ಪಂಚಮಹಾಭೂತಗಳ ವ್ಯಾಪಾರಗಳಾದ್ದರಿಂದ ವೈದ್ಯ-ಶಾಸ್ತ್ರ, ಜ್ಯೋತಿಃಶಾಸ್ತ್ರಗಳ ಬಲದಿಂದ ಆ ಲೋಕಗಳ ಚರಾಚರ ವರ್ಗಕ್ಕೆ ಆಗುವ ವಿಕಾರಗಳನ್ನು ಕಂಡುಹಿಡಿಯುವರು. ಜ್ಯೋತಿಃಶಾಸ್ತ್ರಜ್ಞರು ಗ್ರಹಗಳ ಬಲಾಬಲ ವಿಚಾರದಿಂದ ಆಯುರ್ದಾನವನ್ನೂ, ರೋಗಾದಿ-ಗಳನ್ನೂ ಅವುಗಳಿಗೆ ಯೋಗ್ಯ ಉಪಾಯಗಳನ್ನೂ ಹೇಳುವರು. ಪರ-ಮಾತ್ಮನ ಮಹಾಲೀಲೆಯನ್ನು ಪ್ರತ್ಯಕ್ಷೀಕರಿಸಿಕೊಂಡ ಋಷಿಗಳು ಈ ಶಾಸ್ತ್ರ-ಗಳನ್ನು ಪ್ರವರ್ತಿಸಿರುತ್ತಾರೆ. ಅವರು ಹೇಳಿದ ಯುಕ್ತಿಗಳಿಂದ ಶಾಸ್ತ್ರ ಸಂಚಾಲನೆ ಮಾಡಿದರೆ ಸರಿಯಾದ ಅನುಮಿತಿಯು ಹುಟ್ಟುತ್ತದೆ. ಆದರೆ ಇದರಲ್ಲಿ ಒಂದು ಅಂಶವನ್ನು ಗಮನಿಸಬೇಕು. ಗ್ರಹಗಳಾಗಲಿ, ಪಂಚ-ಮಹಾಭೂತಗಳಾಗಲಿ ಸ್ವಯಂ ಯಾವ ವ್ಯಾಪಾರಗಳನ್ನು ಮಾಡಲಿಕ್ಕೆ ಸಮರ್ಥವಲ್ಲ. ಒಳಗೆ ಇದ್ದ ಅಭಿಮಾನಿ ಜೀವರನ್ನೂ, ದೇವತೆಗಳನ್ನೂ ಪ್ರೇರಿಸುವ ಅಪ್ರತಿಹತ ಶಕ್ತಿಯುಳ್ಳ ಪರಮಾತ್ಮನೇ ಆ ಆ ಕರ್ಮಾನು-ಸಾರವಾಗಿ ಫಲವನ್ನು ಕೊಡತಕ್ಕವನು. ಆದ್ದರಿಂದ ಯಾವದೇ ಶಾಸ್ತ್ರದ ಜ್ಞಾನವು ಸಿದ್ಧಿಪದವನ್ನು ಹೊಂದಬೇಕಾದರೆ ಅಂತರ್ನಿಯಾಮಕನಾದ ಪರ-ಮಾತ್ಮನಲ್ಲಿ ಆದರ - ವಿಶ್ವಾಸಗಳೂ, ಭಕ್ತಿಯೂ ಅತ್ಯವಶ್ಯವಾಗಿವೆ.

( ಯೋ ಹಿ ಯತ್ರ ಆದರವಾನ್ ತಸ್ಯೈವ ತದ್ವಸ್ತು ವಿದ್ಯಮಾನಸಪಿ ಸ್ಫುರೇತ್ । ನ ತ್ವನಾದರವತೋಽನ್ಯತ್ರಾದರವತಶ್ಚಾತ್ ಅನುಭವಸಿದ್ಧಮ್ ।

—ವಿಷ್ಣುತತ್ವನಿರ್ಣಯ ಟೀಕಾ)

ಆದ್ದರಿಂದ ಸೂಕ್ಷ್ಮ ನಿರೀಕ್ಷಣೆಯಿಂದ ಪರಮಾತ್ಮನ ಅನುಗ್ರಹಕ್ಕೆ ಪಾತ್ರ-ರಾದ ಜ್ಯೋತಿಷಜ್ಞರು, ಈ ಯುಕ್ತ್ಯನುಸಂಧಾನದಿಂದಾಗಲಿ, ಮುಖದರ್ಶನ ಮಾತ್ರದಿಂದಾಗಲಿ ಹೇಳಿದ ಫಲಗಳು ( ಭೂತ-ಭವಿಷ್ಯದ್ವರ್ತಮಾನ ಸಂಗತಿ-ಗಳು) ಸತ್ಯವಾಗುವವು. ಆ ಯುಕ್ತ್ಯನುಸಂಧಾವಿಲ್ಲದಿದ್ದರೆ, ಈಶಾನುಗ್ರಹಬಲ-ವಿಲ್ಲದಿದ್ದರೆ ವಾಕ್ಸಿದ್ಧಿಯುಂಟಾಗಲಾರದು. ಯುಕ್ತಿಯಿಂದ ಹೊರಟ ಅನು-ಮಿತಿರೂಪ ಗಣಿತವು ಫಲವನ್ನು ಕೊಡುವ ಶಕ್ತಿಯುಳ್ಳದ್ದಾಗಲಾರದು. ನಮ್ಮ ಪ್ರಾಚೀನ ಋಷಿಗಳು ಉಭಯುಬಲದಿಂದ ಶಾಸ್ತ್ರವನ್ನು ಐಹಿಕಪಾರತ್ರಿಕ ಸದ್ಗತಿಯಾಗಲೆಂದು ಗ್ರಂಥಗಳನ್ನು ಬರೆದು ಮಹೋಪಕಾರ ಮಾಡಿದ್ದಾರೆ.

ಈಗ ಪ್ರಕಟನಾಗುತ್ತಿರುವ ಫಲಜ್ಯೋತಿಷಗ್ರಂಥವು ಅಪೂರ್ವ-ವಾದದ್ದು. ಅಷ್ಟಕವರ್ಗ ಪದ್ಧತಿಯಿಂದ ಗ್ರಹಗಳ ಬಲಾಬಲವನ್ನು ನಿರ್ಧ-ರಿಸಲಿಕ್ಕೆ ಅವ್ಯಭಿಚರಿತ ಉಪಾಯಗಳನ್ನು ಇಲ್ಲಿ ಕಂಡುಹಿಡಿದಿದ್ದಾರೆ. ಇದು ಬಹು ಪ್ರೌಢವಾದ ಅರ್ಥಗಳಿಂದ ತುಂಬಿದ್ದು ಲಲಿತವಾದ ಸಂಸ್ಕೃತ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಎಷ್ಟು ಸುಲಭವಾಗಿದ್ದರೂ ಅದನ್ನು ತಿಳಿದು-ಕೊಳ್ಳಲಿಕ್ಕೆ ಸಮರ್ಥರಾದ ಜ್ಯೋತಿಃಶಾಸ್ತ್ರಜ್ಞರೇ ಅರ್ಹರು. ನಮ್ಮ ಭಾರತ ದೇಶದಲ್ಲಿ ಸಂಪ್ರದಾಯ ಪ್ರಕಾರವಾಗಿ ಶಾಸ್ತ್ರವನ್ನು ಅಧ್ಯಯನ ಮಾಡಿ, ಅದರಲ್ಲಿ ಸುದೀರ್ಘವಾದ ಸಂಶೋಧನೆಯನ್ನು ನಡೆಸಿ, ಅನ್ನವಸ್ತ್ರಗಳ ಪರಿವೆಯಿಲ್ಲದೆ ಜ್ಞಾನಮಗ್ನರಾದ ವಿದ್ವಾಂಸರು ಈಗ ಅತಿ ವಿರಳರಾಗಿ-ದ್ದಾರೆ. ಸ್ವಲ್ಪ ಶಾಸ್ತ್ರದಲ್ಲಿ ಪ್ರವೇಶವಾದೊಡನೆ ಅದನ್ನು ದ್ರವ್ಯಾರ್ಜನೆಯ ಸಾಧನವನ್ನಾಗಿ ಮಾಡಿ ಶಾಸ್ತ್ರದ ಮಹತ್ವವನ್ನು ಹಾಳುಮಾಡಿ ಬಿಡು-ತ್ತಾರೆ. ಯಾರಾದರೂ ಶಾಸ್ತ್ರದಲ್ಲಿ ನಿರತರಾಗಿ ವಿಮರ್ಶೆಯಲ್ಲಿ ತೊಡಗಿ-ದ್ದರೆ ಅವರು ಜಗತ್ತಿನ ಬಾಹ್ಯದೃಷ್ಟಿಗೆ ಬರುವದಿಲ್ಲ.

ಈ ಅಷ್ಟಕವರ್ಗವನ್ನು ಚಿಕಿತ್ಸಕ ಬುದ್ಧಿಯಿಂದ ಅಧ್ಯಯನಮಾಡಿ, ಅದರ ರಹಸ್ಯಗಳನ್ನು ವಿದ್ವಾಂಸರ ಮುಂದೆ ಕನ್ನಡದಲ್ಲಿ ವಿವರಿಸುವ ಪಂಡಿತ ಗಲಗಲಿ ಕೇಶವಶರ್ಮಾ ಇವರು ಜ್ಯೋತಿಃಶಾಸ್ತ್ರದಲ್ಲಿ ಅದ್ಭುತ ಪ್ರತಿಭೆ-ಯುಳ್ಳವರು. ಇವರು ಆಜನ್ಮ, ಜ್ಯೋತಿಃಶಾಸ್ತ್ರವನ್ನು ಹಳೆಯ ಪದ್ಧತಿಯಿಂದ ಮನೆಯ ವಿದ್ಯೆಯೆಂದು ತಮ್ಮ ತಂದೆಯವರಲ್ಲಿ ಅಧ್ಯಯನಮಾಡಿ ಪರಿಣತಿಯನ್ನು ಹೊಂದಿದವರು. ಶ್ರೇಷ್ಠ ವಿಮರ್ಶಕರು. ಸಂಸ್ಕೃತ ಸಾಹಿತ್ಯದಲ್ಲಿ ಅಸದೃಶಪ್ರಭುತ್ವವಿರುವದರಿಂದ ಪ್ರಾಚೀನ ಜೋತಿಷಗ್ರಂಥ-ಗಳನ್ನು ಆಕಲನಮಾಡಿ ಅವುಗಳನ್ನು ಹಸ್ತಗತ ಮಾಡಿಕೊಂಡಿದ್ದಾರೆ. ಮತ್ತು ತಮ್ಮ ಬುದ್ಧಿಬಲದಿಂದ ಪಾಶ್ಚಾತ್ಯ ಜ್ಯೋತಿಃಶಾಸ್ತ್ರವನ್ನು ಸಂಪೂರ್ಣವಾಗಿ ಅಭ್ಯಾಸಮಾಡಿ ಸಾಯನಪದ್ಧತಿಯ ಮೇಲೆ ಪ್ರಭುತ್ವವನ್ನು ಪಡೆ-ದಿದ್ದಾರೆ. ಸಾಯನ, ನಿರಯನ ಇವೆರಡೂ ಪದ್ಧತಿಗಳಲ್ಲಿ ಇವರಿಗೆ ನೈಪುಣ್ಯವಿರುವದರಿಂದ ತಮ್ಮ ಕುಶಾಗ್ರ ಸಂಶೋಧನ ಬುದ್ಧಿಯಿಂದಲೂ ಪರಮಾತ್ಮನ ಅನುಗ್ರಹದಿಂದಲೂ ಈ ಸಮಗ್ರ ಶಾಸ್ತ್ರದಲ್ಲಿ ಸಿದ್ಧಿಯನ್ನು ಪಡೆದ-

ವಿದ್ವಾಂಸರೆಂದು ಹೇಳಬಹುದು. ಇವರು ಹಳ್ಳಿಗಳಲ್ಲಿ ಕಾಲಕಳೆದವರು. ಕನ್ನಡ ಶಾಲೆಯ ೩ ವರ್ಷದ ಟ್ರೇಂಡ್ ಟೀಚರ ಆಗಿ ಮೈಸೂರ ಕನ್ನಡ ಪಂಡಿತ ಪರೀಕ್ಷೆಯಲ್ಲಿ ಉತ್ತಮ ತೇರ್ಗಡೆ ಹೊಂದಿ ಶಾಲಾ ಶಿಕ್ಷಕರಾಗಿ, ಕಡೆಗೆ 'ಹೆಡ್ ಮಾಸ್ತರ್' ಆಗಿ ದುಡಿದು ನಿವೃತ್ತರಾಗಿದ್ದಾರೆ. ಇಂಥ ರತ್ನವು ಸರಕಾರದ ಸಂಕುಚಿತ ಕಣ್ಣಿಗೆ ಹೊಳೆಯಲೇ ಇಲ್ಲ. ಆದರೆ ಅವಹೌಲ್ಯ ಪಂಡಿತ ಕೇಶವಶರ್ಮರು ತಮ್ಮ ಸರಳ ನಿರಾಡಂಬರ ಅತ್ಯಂತ ಮುಗ್ಧವೃತ್ತಿಯವರಿದ್ದು, ಇಡಿಯ ಆಯುಷ್ಯವನ್ನು ಜ್ಯೋತಿಃಶಾಸ್ತ್ರದ ಸಮಗ್ರ ಸಂಶೋಧನೆಯಲ್ಲಿ ಅರ್ಪಣೆ ಮಾಡಿದ್ದಾರೆ; ಸಿದ್ಧರಾಗಿದ್ದಾರೆ. ಇವರು ಈಗ ಸುಮಾರು ೬೫ ವರ್ಷ ಮಿಕ್ಕಿದರೂ ಹರೆಯದವರಂತೆ ಜ್ಯೋತಿಃಶಾಸ್ತ್ರ ಸಂಶೋಧನೆಯಲ್ಲಿ ಹೊಸ ಹುರುಪುಳ್ಳವರಾಗಿದ್ದಾರೆ. ಇವರ ಲಾಭವನ್ನು ಕರ್ನಾಟಕದ ಜನತೆಯೂ ಈಗಿನ ಸ್ವತಂತ್ರ ರಾಷ್ಟ್ರದ ಸರಕಾರವೂ ಯೋಗ್ಯ ರೀತಿಯಿಂದ ಪಡೆದು, ಅವರಲ್ಲಿ ನರ್ತನಮಾಡುತ್ತಿರುವ ಸರಸ್ವತೀದೇವಿಗೆ ಯೋಗ್ಯ ಸತ್ಕಾರವನ್ನು ಸಲ್ಲಿಸಬೇಕು. ಅವರ ಪಾಂಡಿತ್ಯಕ್ಕೆ ಮೆಚ್ಚಿ ನಾನು ಅವರಲ್ಲಿರುವ ಸದ್ಗುಣಗಳನ್ನು ಈ ಪ್ರಸ್ತಾವನೆಯ ಮೂಲಕ ಜನತೆಯ ಮುಂದೆ ಇಟ್ಟಿದ್ದೇನೆ. ಇದು ಯಥಾರ್ಥಕಥನವೇ ಹೊರತು ನಿರರ್ಥಕವಾದ ಪ್ರಶಂಸೆಯಲ್ಲ. ಈ ಗ್ರಂಥವನ್ನು ಅವಲೋಕನ ಮಾಡಿದವರಿಗೆ ಇವರ ಪಾಂಡಿತ್ಯದ ಅರಿವು ತಿಳಿದವರಿಗೆ ಆಗುವದು. ಇಂಥ ಸಂಶೋಧಕರಾದ ಶ್ರೀ ಪಂಡಿತ ಕೇಶವಶರ್ಮಾ ಗಲಗಲಿ ಇವರಿಗೆ ಪರಮಾತ್ಮನು ಆಯುರಾರೋಗ್ಯವನ್ನು ಕೊಟ್ಟು ಇದಕ್ಕೂ ಹೆಚ್ಚು ಕಾರ್ಯವನ್ನು ಮಾಡಿಸಿ ಜನತೆಯಿಂದಲೂ ಸರಕಾರದಿಂದಲೂ ಯೋಗ್ಯ ಮನ್ನಣೆಯನ್ನು ಕೊಡಿಸಲೆಂದು ಹಾರೈಸುತ್ತೇನೆ.

18-12-1958
Pavamana
Sadan,
Malmaddi,
Dharwad

**R. S. Panchamukhi.**
M. A.
Retired Director,
K. R. I. Dharwar

೨

ಶ್ರೀ ಕೇಶವ ಶರ್ಮಾ ಗಲಗಲಿಯವರು ಕನ್ನಡ, ಸಂಸ್ಕೃತ ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಯನ್ನು ಪಾಂಡಿತ್ಯ ಪ್ರಚುರವಾಗಿಯೂ, ಮನ ಬಿಚ್ಚಿಯೂ ಮಾಡಬಲ್ಲವರು. ಶಿಕ್ಷಣ ಮತ್ತು ಸಂಶೋಧನಗಳಲ್ಲಿ ಪರಿಶ್ರಮ ಮಾಡಿದವರು. ಅವರು ಬಿಟ್ಟೂ ಬಿಡದೆ ನಡೆಸುತ್ತಿರುವ ಇನ್ನೊಂದು ವ್ಯಾಸಂಗವೆಂದರೆ ಫಲ-ಜ್ಯೋತಿಷ್ಯ. ವಾರ ವಾರವೂ ಅವರ ಲೇಖನಗಳನ್ನು ಅಲ್ಲೋ ಇಲ್ಲೋ ಓದುಗರು ಕಂಡೇ ಕಾಣುತ್ತಾರೆ. 'ಅಷ್ಟಕವರ್ಗ ಪದ್ಧತಿ' ಎಂಬ ಅವರ ಹೊಸ ಪುಸ್ತಕವು ಫಲ-ಜ್ಯೋತಿಷ್ಯದಲ್ಲಿ ಒಲವುಳ್ಳವರಿಗೆ ಸಾರವತ್ತಾಗಿಯೂ ರಂಜಕವಾಗಿಯೂ ಕಂಡು ಬರುವದರಲ್ಲಿ ಸಂಶಯವಿಲ್ಲ. ಅದರ ಕೆಲವು ಪುಟಗಳನ್ನು ನಾನು ನೋಡಿದ್ದೇನೆ.

ಸ್ಥೂಲತಮಾದಿಂದ ಫಲಾದೇಶವನ್ನು ಹೇಳುವ ವಿನೋದಕರ ಪದ್ಧತಿಯು ಸದ್ಯಕ್ಕೆ ದಿನಬಳಕೆಯಲ್ಲಿದೆ. ಇದನ್ನು ಸಾಮಾನ್ಯರೂ ಬಲ್ಲರು. ದಿನಗಟ್ಟಲೆ ಲೆಕ್ಕ ಹಾಕಿ ದಿನ ದಿನದ ಫಲ ತಿಳಿದುಕೊಳ್ಳುವ ಜಟಿಲ ಮಾರ್ಗವಿದೆ. ಅದು ಮಧ್ಯಮ ವರ್ಗದವರಿಗೆ ನಿಲುಕುವದಿಲ್ಲ. ಮಧ್ಯಮ ವರ್ಗಕ್ಕೆ ಒಂದು ಮಧ್ಯಮ ಪದ್ಧತಿಬೇಕು. ಅದರ ಒಂದು ಒಳ್ಳೆಯ ಮಾದರಿ ಇಲ್ಲಿದೆ. ಇದು ಕೇವಲ ಭಾಷಾಂತರ ಗ್ರಂಥವಾಗಲಿ, ಹತ್ತು ಕಡೆಯ ಮಾತಿನ ಸಿಪ್ಪೆಯಾಗಲಿ ಆಗಿರದೆ, ಇಲ್ಲಿಯ ಪದ್ಧತಿಗೆ ಅನುಕೂಲವಾದ ಬೇರೆ ಉಚಿತ ಉಕ್ತಿ-ಗಳಿಂದ ಒಂದನ್ನೇ ಸ್ಪಷ್ಟಪಡಿಸುವ ಅಕ್ಲಿಷ್ಟ ರೀತಿಯ ಪ್ರಬಂಧವಾಗಿದೆ.

ಇಂಥ ಗ್ರಂಥದ ಉಪಯುಕ್ತತೆಯೂ ಪ್ರಭಾವವೂ ಹೆಚ್ಚಾಗ-ಬೇಕಾದರೆ ಸದ್ಯಃ ಕಾಲದ ವ್ಯಕ್ತಿಗಳ ಜಾತಕಗಳನ್ನು ಅಷ್ಟಕವರ್ಗ ಪದ್ಧತಿಯಿಂದ ಫಲಾದೇಶ ಸಿದ್ಧಪಡಿಸಿ, ಅದರಿಂದ ಕಂಡುಬಂದ ಸರಿ-ತಪ್ಪುಗಳನ್ನು ವಿಮರ್ಶಿಸಿ ಪ್ರಕಟಗೊಳಿಸಬೇಕು. ಇದರಿಂದ ಮತ್ತೂ ಕೆಲವು ಹೊಸ ನಿಯಮಗಳೂ ಪ್ರಕಾಶಗೊಳ್ಳಬಹುದು.

ಈ ಗ್ರಂಥವನ್ನು ಸುಗಮವನ್ನಾಗಿ ಮಾಡಿ ಬರೆದುದಕ್ಕೆ ಪಂಡಿತ ಕೇಶವಶರ್ಮರಿಗೆ ನಾವು ಋಣಿಗಳಾಗಿದ್ದೇವೆ. ಇದೇ ಬಗೆಯ ಬೇರೆ ಉಪಯುಕ್ತ ಗ್ರಂಥಗಳು ಅವರ ಅನುಭವದ ವಿವೇಚನೆಯೊಂದಿಗೆ ಬಂದರೆ ಈ ವಾಙ್ಮಯವು ಕನ್ನಡದಲ್ಲಿಯೂ ಪರಿಪುಷ್ಟಿಗೊಂಡೀತು.

ಸಾಧನಕೇರಿ
೧೩–೧೨–೧೯೫೮ ದ. ರಾ. ಬೇಂದ್ರೆ

೩

ಪಂಡಿತ ಕೇಶವಶರ್ಮಾ ಗಲಗಲಿಯವರು ಬರೆದ 'ಅಷ್ಟಕವರ್ಗ ಪದ್ಧತಿ' ಎಂಬ ಜ್ಯೋತಿಶ್ಯಾಸ್ತ್ರದ ಪುಸ್ತಕವನ್ನು ಓದಿ ನೋಡಿದೆ. ನಾನೇನೂ ಆ ಶಾಸ್ತ್ರಪಂಡಿತನಲ್ಲ. ಆದರೂ ಈ ಪುಸ್ತಕದ ಮಹತ್ವವು ಏತರಲ್ಲಿ ಇರುವದೆಂಬುದನ್ನು ತಿಳಿದುಕೊಳ್ಳಲಿಕ್ಕೆ ಪ್ರಯತ್ನಿಸಿ-ರುವೆ. ಅದನ್ನೇ ನಾನು ಇಲ್ಲಿ ಕೊಟ್ಟಿರುವೆ. ನನ್ನ ಅಭಿಪ್ರಾಯದಂತೆ ಈ ಪುಸ್ತಕವು ತಜ್ಞರಿಗಂತೂ ಅತ್ಯಂತ ಉಪಯುಕ್ತವಾಗಿದೆ ಎಂಬುದನ್ನು ಹೇಳುವ ಕಾರಣವೇ ಇಲ್ಲ. ತಜ್ಞರಲ್ಲದವರೂ ಕೂಡ ತುಸು ಶ್ರಮದಿಂದ ಇದರ ಉಪಯುಕ್ತತೆಯನ್ನು ಕೆಲವಟ್ಟಿಗೆ ಕಂಡುಕೊಂಡು ಜ್ಯೋತಿಷ-ಶಾಸ್ತ್ರದಲ್ಲಿ ತಮ್ಮ ವಿಶ್ವಾಸವನ್ನು ಬೆಳೆಸಿಕೊಳ್ಳಬಹುದು.

ಹುಟ್ಟಿದ ಕೂಡಲೆ ಮಗುವಿನ ಜನ್ಮಕುಂಡಲಿಯನ್ನು ಬರೆಯಿಸಿ-ಕೊಳ್ಳುವ ಪದ್ಧತಿ ರೂಢಿಯಲ್ಲಿರುವುದು. ಆ ಕುಂಡಲಿಯ ಮೇಲಿಂದಲೇ ಉಪನಯನ, ಮದುವೆ ಮುಂತಾದ ಧಾರ್ಮಿಕ ಸಂಸ್ಕಾರಗಳನ್ನು ಜರುಗಿ-ಸುವ ರೂಢಿಯುಂಟು. ಆದಕಾರಣ ಜನ್ಮಕುಂಡಲಿಯನ್ನು ಸರಿಯಾಗಿ ಬರೆಯಿಸಿಕೊಳ್ಳುವದು ಪ್ರಥಮ ಕಾರ್ಯ, ಏಕೆಂದರೆ ಜನ್ಮಕಾಲದ ನಿರ್ಣ-ಯವು ಸರಿಯಾಗಿ ಗೊತ್ತಾದರೇನೇ ಮುಂದಿನ ಫಲಗಳು ಸರಿಯಾಗಿ ಬರುವವು.

ಕುಂಡಲಿಯಿಂದ ಫಲಗಳನ್ನು ಹೇಳುವ ಈಗಿನ ಪದ್ಧತಿಯೆಂದರೆ **ದಶಾಪದ್ಧತಿ.** ದಶಾಪದ್ಧತಿಯೆಂದರೆ ಚಂದ್ರನಿರುವ ರಾಶಿಯಿಂದ ಜನ್ಮ-ಕಾಲದ 'ದಶೆ'ಯನ್ನು ಗೊತ್ತುಪಡಿಸಿ, ತದನಂತರ ಮಿಕ್ಕ ಗ್ರಹಗಳ ದಶಾ-ವರ್ಷಗಳನ್ನು ಹೇಳುತ್ತಾರೆ. ಇಂತಿಂಥ ಗ್ರಹಗಳಿಗೆ ಇಂತಿಷ್ಟು ವರ್ಷ-ಗಳಿರುತ್ತವೆಂದು ನಿಶ್ಚಯಿಸಿರುವರು. ತದನಂತರ 'ಅಷ್ಟಕವರ್ಗ ಪದ್ಧತಿ' ಯಿಂದ ಫಲಗಳನ್ನು, ಕಾಲವನ್ನು ನಿರ್ದಿಷ್ಟವಾಗಿ ಗೊತ್ತುಪಡಿಸುವರು. ಇದು ನಿಜವಾದ ಶಾಸ್ತ್ರೀಯ ಪದ್ಧತಿ. ಈ ಶಾಸ್ತ್ರೀಯ ಪದ್ಧತಿಯ ವಿವರಣೆ-ಉದಾಹರಣೆಗಳನ್ನು ಕೊಟ್ಟು ತಿಳಿಸಿ ಹೇಳಲ್ಪಟ್ಟಿದೆ.

ಕನ್ನಡದಲ್ಲಿ ಇಂಥ ಶಾಸ್ತ್ರೀಯ ಗ್ರಂಥಗಳು ಇರುವುದಿಲ್ಲ. ಈ ಕೊರತೆಯನ್ನು ಸಾಹಿತ್ಯ ಹಾಗೂ ಜ್ಯೋತಿಷಶಾಸ್ತ್ರ ಹೀಗೆ ಉಭಯಶಾಸ್ತ್ರ ಪಂಡಿತರಾದ ಕೇಶವಶರ್ಮಾ ಇವರು ಇಂಥ ಮುಪ್ಪಿನಲ್ಲಿಯೂ ಕೂಡ ಶ್ರಮಪಟ್ಟು ಈ ಗ್ರಂಥ ಬರೆದಿರುವದು ಸ್ತುತ್ಯ. ಇದರ ಲಾಭವನ್ನು ಕನ್ನಡಿಗರೆಲ್ಲರೂ ಪಡೆಯುವರೆಂದು ಹಾರೈಸುವೆನು.

ಧಾರವಾಡ
೨೫-೧೨-೫೮ ಆಲೂರ ವೆಂಕಟರಾಯರು



ೞ

ಶ್ರೀ ಚಿದಂಬರ ಶರಣಮ್ ।

ಪಂಡಿತವರೇಣ್ಯೈಃ ಜೋತಿಃಶಾಸ್ತ್ರವಿಮರ್ಶನೆ ತನೂಕೃತ ತನೂಭಿಃ ಶ್ರೀ ಕೇಶವಶರ್ಮಭಿಃ ವಿರಚಿತಃ 'ಅಷ್ಟಕವರ್ಗ ಪದ್ಧತಿ' ರಿತಿ ಪ್ರಬಂಧಃ ಆಚೂಲಮೂಲ ಅವಲೋಕಿತಃ। ಜ್ಯೋತಿಷೇ ಶಾಸ್ತ್ರೇ ಕೃತ ಭೂರಿಪರಿ-ಶ್ರಮಾಣಾಂ ಪಂಡಿತಮಹೋದಯಾನಾಂ ಕೃತಿರಿಯಂ ಸುಲಭಯಾ ಪದ್ಧತ್ಯಾ ಜ್ಯೋತಿಃಶಾಸ್ತ್ರ ಪ್ರವಿವಿಕ್ಷೂಣಾಂ ಪ್ರದೀಪಾಯಮಾನೇತ್ಯತ್ರ ನೈವ ಸಂದೇಹಃ। ವಿಷಯಾಣಾಂ ವಿವರಣ ಪದ್ಧತಿಃ, ಭಾಷಾ ಸರಣಿಃ ಪರಿಶೀಲನ ಪರಿಪಕ್ವಾ ವಿಷಯಾಶ್ಚ ಸತ್ಯಮೇವ ಸಹೃದಯಾನಾಂ ಚೇತಾಂಸಿ ತರ್ಪ-ಯಂತಿ। ಪ್ರಬಂಧಸ್ಯಾಸ್ಯ ನಿರ್ಮಾಣೇನ ಕರ್ನಾಟಕ ಭಾಷಾ ವಿದುಷಾಂ, ಫಲಜ್ಯೋತಿಷೇ ಜಜ್ಞಾಸೂನಾಂ ಮಹಾನುಪಕಾರಃ ಸಂಪಾದಿತ ಇತಿ ಪ್ರಮೋದತೇ ಮೇ ಚೇತಃ। ನಿಬಂಧಸ್ಯಾಧ್ಯಯನೇನ ಪಂಡಿತವರಾಣಾಂ ಪರಿಶ್ರಮಂ ಸಫಲಯಂತು ಸಹೃದಯಾ ಗುಣಗ್ರಾಹಿಣ ಇತಿ ವಿಜ್ಞಾಪಯಾಮಿ।

ವಿದುಷಾಂ ವಿಧೇಯಃ
**ಚಿದಂಬರಸೂನುಃ ಮಾರ್ತಾಂಡಶರ್ಮಾ**
ನ್ಯಾಯಮೀಮಾಂಸ ವಿದ್ವಾನ್ ಟಿಳಕ ಮಹಾರಾಷ್ಟ್ರ
ವಿದ್ಯಾಪೀಠ, ಪುಣೆ

# ಶುದ್ಧಿಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೬ | ೧೮ | ಗೃಹಾತ್ | ಗ್ರಹಾತ್ |
| ೧೭ | ಕುಂಡಲಿಯಲ್ಲಿ | ಬುಧ | ಬುಧ |
| | ೧೦ ನೆಯ ಸ್ಥಾನ | ೧-೧-೧೧ | ೧೧.೧೧ |
| ೨೬ | ೯ | ಮುತ್ಸ್ನೃಜೇತ್ | ಮುತ್ಸೃಜೇತ್ |
| ೨೭ | ೧೫ | ಮಗಹಾತ್ | ಮಗ್ರಹಾತ್ |
| ೩೩ | ೧೮ | ಚೇನ್ನದ | ಚೇನ್ನವ |
| ೩೬ | ೬ | ಮಾಸಗಳು | ರಾಶಿಗಳು |
| ೪೨ | ೪ | ಪೂರ್ಣಾರ್ಕ್ಷಕ್ಷೇಂದು | ಪೂರ್ಣಾರ್ಕ್ಷ್ಕಕ್ಷೇಂದು |
| ೪೨ | ೧೩ | ,, | ,, |
| ೪೩ | ೧೬ | ದೀಶಿಹ | ದಿಶೀಯ |
| ೪೭ | ೫ | ಸಂಗಣ್ಣ | ಸಂಗಣ್ಯ |
| ೬೨ | ೨೧ | ಜ್ಯೋತಿಶ್ಯಾಸ್ತ್ರವನ್ನು | ಜ್ಯೋತಿಶ್ಶಾಸ್ತ್ರಜ್ಞನನ್ನು |
| ೬೨ | ೨೩ | ಇವರ | ಇದರ |
| ೬೬ | ತ್ರಿಕೋಣ ಶೋಧನ ಕುಂಡಲಿಯಲ್ಲಿಯ ಅಷ್ಟಮ ಸ್ಥಾನದಲ್ಲಿಯ ೩ ರ ಅಂಕೆಯನ್ನು ಅಳಿಸಬೇಕು. | | |
| ೭೩ | ೧೨ | ಮೇಷದಿ | ಮೇಷಾದಿ |
| ೭೬ | ೨ | ೫ | ೪ |
| ೭೯ | ೧೫ | ದಶಿ | ರಾಶಿ |
| ೮೪ | ೨ | ಛಿದ್ರುದಶೆ | ಛಿದ್ರದಶೆ |
| ೯೨ | ೪ | ಸುಮೂಲಾ | ಸಮೂಲಾ |
| ೯೨ | ೧೫ | ಮುಹು | ಮುಡು |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೯೩ | ೧೬ | ಧಿಕಾಪತ್ಯರ್ಕ | ಧಿಕಾಪತ್ಯರ್ಕ್ಷ |
| ೧೦೦ | ೧ | ಲಗ್ನಾಷ್ಟಕವರ್ಗದಲ್ಲಿ ಸೂರ್ಯನಿಂದ ೧೦ ರಲ್ಲೂ ಒಂದು ಬಿಂದು (ಮೂಲದಲ್ಲಿ ಹಾರಿದೆ) | |
| ೧೭೯ | ೨ ನೆಯ | ಕುಂಡಲಿಯಲ್ಲಿ ಪಂಚಮಸ್ಥಾನದಲ್ಲಿಯ ೨ ಅಂಕೆ–ಯನ್ನು ಹಾಕಬಾರದು (ಖಾಲಿ ಇಡಬೇಕು) | |
| ೧೨೦ | ೧೨ | ಪುಹ್ಯ | ಪುಷ್ಯ |
| ೧೨೩ | ೧೮ | ಹಾನಿವಲಾತ್ | ಹಾನಿಮಲಪ್ಪಾತ್ |
| ೧೨೫ | ೨೦ | ಕಕಾದ್ಯಂ | ಕರ್ಕಾದ್ಯಂ |
| ೧೩೦ | ೧೧ | ಹೆಚ್ಚು | ಹೆಚ್ಚು |
| ೧೩೫ | ೯ | ಪಾರ್ವೋಕ್ತ | ಪೂರ್ವೋಕ್ತ |
| ೧೪೮ | ೯ | ದಹಂ ಸ್ಥಾನದಲ್ಲಿ ೦ ತಿಂಗಳಿದ್ದಲ್ಲಿ ೯ ಇರಬೇಕು. | |
| ೧೫೧ | ೧೯ | ವಾಯುು | ವಾಣಿಯು |
| ೧೫೩ | ೧೧ | ೩ ರ ಅಂಕೆ ಹೆಚ್ಚಿಗೆ ಬಿದ್ದಿದೆ ತೆಗೆಯಬೇಕು. | |
| ೧೫೮ | ೬ | ಘಲ | ಫಲ |
| ೧೬೧ | ೬ | ಒದೊಂದು | ಒಂದೊಂದು |
| ೧೬೪ | ೧೬ | ದಶುಮಂ | ದಶಮಂ |
| ೧೬೫ | ೧೩ | ಲಗ್ನಾಧಿಪತಿಯಿದ | ಲಗ್ನಾಧಿಪತಿಯಿಂದ |
| ೧೬೮ | ೧೧ | ಕ್ರಷ್ಣ ದೇಹಃ | ಕೃಷ್ಣ ದೇಹಃ |